ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ – 583276



ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ 2017–18

ವಿಷಯ :

# "ಮಡಿವಾಳ ಮಾಚಿದೇವರ ವಚನಗಳ ಸಾಂಸ್ಕೃತಿಕ ಅಧ್ಯಯನ"

ಸಂಶೋಧನಾ ವಿದ್ಯಾರ್ಥಿ
ಅಶೋಕ್‌ಕುಮಾರ್ ಬಿ.ಎಸ್.
ನೋಂದಣಿ ಸಂಖ್ಯೆ : 172001030033

ಮಾರ್ಗದರ್ಶಕರು
ಡಾ. ಡಿ.ಕೆ. ಚಿತ್ತಯ್ಯ ಪೂಜಾರ್
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು – 560056

ಮಾನ್ಯತಾ ಸಂಸ್ಥೆ
ಕನ್ನಡ ಸಾಹಿತ್ಯ ಪರಿಷತ್ತು
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು – 560018

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ವಿದ್ಯಾರಣ್ಯ – 583276





ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ 2017–18

ವಿಷಯ :

# "ಮಡಿವಾಳ ಮಾಚಿದೇವರ ವಚನಗಳ ಸಾಂಸ್ಕೃತಿಕ ಅಧ್ಯಯನ"

ಸಂಶೋಧನಾ ವಿದ್ಯಾರ್ಥಿ

**ಅಶೋಕ್‌ಕುಮಾರ್ ಬಿ.ಎಸ್.**

ನೋಂದಣಿ ಸಂಖ್ಯೆ : 172001030033

ಮಾರ್ಗದರ್ಶಕರು

**ಡಾ. ಡಿ.ಕೆ. ಚಿತ್ತಯ್ಯ ಪೂಜಾರ್**

ಸಹಾಯಕ ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ

ಜ್ಞಾನಭಾರತಿ, ಬೆಂಗಳೂರು – 560056

ಮಾನ್ಯತಾ ಸಂಸ್ಥೆ

**ಕನ್ನಡ ಸಾಹಿತ್ಯ ಪರಿಷತ್ತು**

ಕನ್ನಡ ಸಂಶೋಧನಾ ಕೇಂದ್ರ

ಪಂಪ ಮಹಾಕವಿ ರಸ್ತೆ

ಚಾಮರಾಜಪೇಟೆ, ಬೆಂಗಳೂರು – 560018





# ಮಾರ್ಗದರ್ಶಕರ ದೃಢೀಕರಣ ಪತ್ರ

**ಅಶೋಕ್‌ಕುಮಾರ್ ಬಿ.ಎಸ್.** ರವರು ಎಂ.ಫಿಲ್. ಪದವಿಗಾಗಿ **"ಮಡಿವಾಳ ಮಾಚಿದೇವರ ವಚನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30.08.2018
ಸ್ಥಳ : ಬೆಂಗಳೂರು

ಮಾರ್ಗದರ್ಶಕರು
**ಡಾ. ಡಿ.ಕೆ. ಚಿತ್ತಯ್ಯ ಪೂಜಾರ್**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು – 560056

ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು - 56

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ **"ಮಡಿವಾಳ ಮಾಚಿದೇವರ ವಚನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ಸಂಶೋಧನಾ ನಿಬಂಧವನ್ನು **ಡಾ. ಡಿ.ಕೆ. ಚಿತ್ತಯ್ಯ ಪೂಜಾರ್** ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

B. S. Ashokkumar

ದಿನಾಂಕ : 30/08/2018.
ಸ್ಥಳ : ಬೆಂಗಳೂರು

**ಅಶೋಕ್‌ಕುಮಾರ್ ಬಿ.ಎಸ್.**
(ಸಂಶೋಧನಾ ವಿದ್ಯಾರ್ಥಿ)
ನೋಂ. ಸಂ : 172001030033

# ಪರಿವಿಡಿ

## ಅಧ್ಯಾಯ – 1

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

**ಪೀಠಿಕೆ :–**

12ನೇ ಶತಮಾನವು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ದೃಷ್ಟಿಯಿಂದ ಅತಿಹೆಚ್ಚು ಮಹತ್ವಪೂರ್ಣವೂ, ವಿಶಿಷ್ಟವೂ ಆದ ಕಾಲಘಟ್ಟವಾಗಿದೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ವಚನ ಸಾಹಿತ್ಯಯುಗ'ವು ಅನುಭವಿಗಳ, ಅನುಭಾವಿಗಳ ಪರಿಶುದ್ಧ ಭಾವದಿಂದ ಹೊರಹೊಮ್ಮಿದ, ಅಜ್ಞಾನಿಗಳ ಮನದ ಅಂಧಕಾರವನ್ನು ಕಳೆಯಬಲ್ಲ, ದಾನವತ್ವದಿಂದ ಮಾನವತೆಯೆಡೆಗೆ, ಮಾನವತೆಯಿಂದ ದೈವತ್ವದೆಡೆಗೆ ಕೊಂಡೊಯ್ಯಬಲ್ಲ ವಚನ ರಚನೆಗಳ ಮೂಲಕ ಮಹತ್ತರವಾದ ಯುಗವೆನಿಸಿದೆ. ಸಾಮಾಜಿಕ ಸಮಾನತೆಗಾಗಿ, ವೈಚಾರಿಕ ಕ್ರಾಂತಿಗಾಗಿ, ಪುರುಷ– ಸ್ತ್ರೀ ಭೇದವಿಲ್ಲದೆಯೆ ಸರಿಸಮಾನವೆಂಬ ಸಮಾನತೆಯ ತತ್ವಕ್ಕಾಗಿ, ಮೂಢನಂಬಿಕೆಯ ಖಂಡನೆ, ಕಾಯಕ ತತ್ವದ ಪ್ರತಿಪಾದನೆ, ಕಂದಾಚಾರ, ಬೂಟಾಟಿಕೆಯ ವಿಡಂಬನೆ, ಜಾತೀಯತೆಯ ನಿರ್ಮೂಲನೆ, ಧರ್ಮ– ನೀತಿ, ಪರಹಿತ ಚಿಂತನೆ, ಅಧ್ಯಾತ್ಮ ಸಾಧನೆ, ಪರಸ್ಪರ ಬಾಂಧವ್ಯ, ಲೋಕೋಪಚಾರ, ಧರ್ಮಪ್ರಸಾರ, ಷಟ್‌ಸ್ಥಲ, ಅಂಗಲಿಂಗ ಸಂಬಂಧ, ಅಷ್ಟಾವರಣ, ಪಂಚಾಚಾರ, ಗುರು – ಲಿಂಗ – ಜಂಗಮ ತ್ರಿವಿಧಗಳು ಮುಂತಾದ ಅಂಶಗಳ ಬಗ್ಗೆ ಬಸವಾದಿ ಶಿವ ಶರಣರು ವಚನಗಳ ಮುಖೇನ ಪ್ರತಿಪಾದಿಸಿದರು.

ಹನ್ನೆರಡನೆಯ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿ, ಸಾಹಿತ್ಯ ಕ್ರಾಂತಿ, ಧರ್ಮಕ್ರಾಂತಿ, ನೈತಿಕ ಕ್ರಾಂತಿ, ವಿಚಾರಕ್ರಾಂತಿಯಾದ ವಚನ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಮನಸ್ಸಿನಾಳದ ಭಾವನೆಗಳಿಗೆ, ವೈಚಾರಿಕ ನಿಲುವುಗಳಿಗೆ "ವಚನಗಳ" ಮೂಲಕ ಅಭಿವ್ಯಕ್ತಿಯ ರೂಪಕೊಟ್ಟವರು ಬಸವಾದಿ ಶಿವಶರಣರು.

ಬಸವೇಶ್ವರರು ಬಯಸಿದ ಉದಾತ್ತ ಸಮಾಜರಚನೆಯ ಕಾರ್ಯವನ್ನು ಮತ್ತು ಅವರ ಧಾರ್ಮಿಕ ಪ್ರಪಂಚದಲ್ಲಿ ಉಂಟುಮಾಡಿದ ಕ್ರಾಂತಿಯನ್ನು ಪುಷ್ಟೀಕರಿಸಲು ಅವರ ಸಮಕಾಲೀನ ಅನೇಕ ಶಿವಶರಣರು ಅವರಿಗೆ ಅನುವಾಗಿ ಬಂದದ್ದು ಬಸವೇಶ್ವರರ ಒಂದು ಸೌಭಾಗ್ಯ. ಬಸವೇಶ್ವರರ ವಿಚಾರಕ್ರಾಂತಿಗೆ ತಮ್ಮ ಜ್ಞಾನ ಮತ್ತು ವೈರಾಗ್ಯಗಳ ಬೆಂಬಲವನ್ನಿತ್ತು ಅದನ್ನು ಮುಂದುವರಿಸಿದರು, "ವೈರಾಗ್ಯ ಚಕ್ರವರ್ತಿ ಎಂದು ಹೆಸರಾದ ಅಲ್ಲಮಪ್ರಭುಗಳವರು, ಶುದ್ಧವೂ ಮತ್ತು ಸಮೃದ್ಧವೂ ಆದ ಸಮಾಜವನ್ನು ಕಟ್ಟುವ ಕಾರ್ಯದ ಕರ್ಣಧಾರತ್ವವನ್ನು ವಹಿಸಿದವರು 'ಷಟ್‌ಸ್ಥಳ ಸಾರ್ವಭೌಮ'ರಾದ ಚೆನ್ನಬಸವೇಶ್ವರರು, ನಾಯಕರಾದ ಬಸವೇಶ್ವರರು ರಚಿಸಿದ ಜಾತ್ಯತೀತ ಮತ್ತು ದಯಾಪೂರ್ಣ ಸಮಾಜದ ಮುನ್ನಡೆಗೆ ಶ್ರಮಿಸಿದ ಮತ್ತೊಬ್ಬರೆಂದರೆ 'ಶಿವಕೀರ್ತಿಶರಧಿಶಶಿ' ಎಂಬ ಹೆಸರುಗಳಿಸಿದ ಸಿದ್ಧರಾಮೇಶ್ವರರು, ಕಾಯಕತತ್ವದ ವ್ಯಾಖ್ಯಾನವಾಗುವಂತೆ ತಮ್ಮ ಜೀವನವನ್ನು ಅಳವಡಿಸಿಕೊಂಡವರು 'ವೀರಘಂಟೆಯ' ಮಡಿವಾಳ ಮಾಚಿದೇವರು, ಕಲ್ಯಾಣದಲ್ಲಾದ ಕ್ರಾಂತಿಯಲ್ಲಿ ಚೆನ್ನಬಸವಣ್ಣ ಮತ್ತು ಮಡಿವಾಳಯ್ಯನವರಿಗೆ ಬೆಂಬಲವಾಗಿ ನಿಂತವರು 'ಘನಲಿಂಗಿ' ರುದ್ರ

ಮುನಿಗಳು"[1] ಮುಂತಾದ ವಚನಕಾರರು ಬಸವೇಶ್ವರರ ಧಾರ್ಮಿಕ ಸುಧಾರಣೆಗಳನ್ನು ಸಾರ್ಥಕಗೊಳಿಸುವ ಕಾರ್ಯದಲ್ಲಿ ಸಹಾಯಕರಾಗಿ ನಿಂತರು.

ಕರ್ನಾಟಕದ ಸಾಂಸ್ಕೃತಿಕ ಬದುಕಿನ ಮೇಲೆ ಆಳವಾದ ಪ್ರಭಾವ ಬೀರಿದ ವ್ಯಕ್ತಿತ್ವ ಮಡಿವಾಳ ಮಾಚಿದೇವರದು. ಹನ್ನೆರಡನೆ ಶತಮಾನದ ಶರಣರ ಚಳುವಳಿಯಲ್ಲಿ ಅವರು ವಹಿಸಿದ ನಿರ್ಣಾಯಕ ಪಾತ್ರದ ಬಗ್ಗೆ ಎರಡನೆ ಮಾತಿಲ್ಲ. ಅಲ್ಲಮಪ್ರಭು, ಅಕ್ಕಮಹಾದೇವಿ, ಬಸವೇಶ್ವರರಾದಿಯಾಗಿ ಹಲವಾರು ಜ್ವಲಂತ ಸಮಕಾಲೀನ ಶರಣರು ಮಾಚಿದೇವರ ಅಚಲಭಕ್ತಿ ಮತ್ತು ನಿಷ್ಠೆಗಳನ್ನು ಮನಸಾರೆ ಕೊಂಡಾಡಿದ್ದಾರೆ. ಕಲ್ಯಾಣದ ವಿಪ್ಲವದ ಕೊನೆಯ ಸ್ಫೋಟಕ ಘಟ್ಟದಲ್ಲಂತೂ ಮಾಚಿದೇವರು ಶರಣಧರ್ಮ ಮತ್ತು ಮೌಲ್ಯಗಳ ಉಳಿವಿಗಾಗಿ ನಡೆಸಿದ ಧೀರೋದಾತ್ತ ಹೋರಾಟವೂ ಸರ್ವವಿದಿತ. ಮಾಚಿದೇವರ ನ್ಯಾಯ ನಿಷ್ಠುರತೆಗೆ, ಸತ್ಯನಿಷ್ಠೆಗೆ 'ದಾಕ್ಷಿಣ್ಯಪರ ನಾನಲ್ಲ' ಎಂಬ ಬಸವವಾಣಿಯ ಶ್ರದ್ಧೆಗೆ ಅನ್ಯಾಯದ ವಿರುದ್ಧದ ಮನೋಭಾವನೆಗೆ ಅವರ ಒಂದು ವಚನ ನಿತ್ಯಸತ್ಯವಾಗಿ ನಮಗೆ ಜಾಗೃತಿಯ ಗಂಟೆ ಬಾರಿಸುತ್ತದೆ.

ಲೋಕದಲ್ಲಿ ಸುಖವಾಗಿ ಬಾಳುವುದಕ್ಕೆ ಪ್ರತಿಯೊಬ್ಬರಿಗೂ ಉದ್ಯೋಗ ಅತ್ಯಾವಶ್ಯಕವಾದುದು. ಉದ್ಯೋಗವಿಲ್ಲದೆ ಯಾರೂ ಕೀಳುಗಳೆಂದೆನಿಸದೆ ಔದ್ಯೋಗಿಕ ಸಮಾನತೆಯ ತತ್ವವನ್ನು ಸಮಾಜದಲ್ಲಿ ಪ್ರಸಾರಗೊಳಿಸಬೇಕೆಂಬ ಮಹತ್ತರ ಮನೋಭಾವ ಹೊಂದಿದ್ದವರು ಮಡಿವಾಳ ವೃತ್ತಿಯನ್ನು ಕೈಗೊಂಡ ಮಾಚಿದೇವರು. ತನ್ನ ಕಾಯಕವನ್ನು ನಿಷ್ಠೆಯಿಂದ ಮಾಡುತ್ತಲೇ ವಚನಗಳ ರಚನೆಯ ಮೂಲಕ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿದ ಮಡಿವಾಳ ಮಾಚಿದೇವರು ವಚನ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಆದ್ದರಿಂದಲೇ ಮಡಿವಾಳ ಮಾಚಿದೇವರ ವಚನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯ ವಸ್ತುವನ್ನು ಸಂಶೋಧನೆಗೆ ಆಯ್ಕೆಮಾಡಿಕೊಂಡಿರುತ್ತೇನೆ.

**ಉದ್ದೇಶ ಮತ್ತು ವ್ಯಾಪ್ತಿ :-**

ಶಿವಶರಣರು ಸಾಮಾಜಿಕ ವ್ಯವಸ್ಥೆಯಲ್ಲಿ ಕಾಯಕ ತತ್ವಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿ, ಕಾಯಕಕ್ಕೆ ಕುಲದ ಮೂಲವಿಲ್ಲವೆಂದು ಸಾರಿದವರು ಮಡಿವಾಳ ಮಾಚಿದೇವರು. ಕಾಯಕದಲ್ಲಿ ನಾಯಕತ್ವವನ್ನು ರೂಪಿಸಿಕೊಂಡವರು. ಮಡಿವಾಳ ಮಾಚಿದೇವರು ಕೇವಲ ವಚನ ರಚನೆಗಳಲ್ಲಿ ಮಾತ್ರವೇ ತೊಡಗಿಸಿಕೊಳ್ಳದೆ ಬಸವಣ್ಣನವರೊಂದಿಗೆ 'ವಚನ ರಕ್ಷಕ'ನಾಗಿಯೂ ಕಾಣಿಸಿಕೊಳ್ಳುತ್ತಾರೆ.

"ನೂರೊಂದು ತಲಗಳಿಗೆ ನೂರೆಂದು ಶರಣರನು
ವೀರ ಮಾಚಣ್ಣ ಕರವಾಳು! ಬಸವನಿಗೆ
ಧೀರಕಾಯಕದ ಹುರಿಯಾಳು"[2]

ಮಡಿವಾಳ ಮಾಚಿದೇವರು 'ಕಲಿದೇವರ ದೇವಾ' ಎನ್ನುವ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದು, 353 ವಚನಗಳು ಲಭ್ಯವಾಗಿದೆ. ಮಾಚಿದೇವರ ವಚನಗಳನ್ನು ಪ್ರಸ್ತುತ ನಿಬಂಧದ ಅಧ್ಯಯನ ವ್ಯಾಪ್ತಿಗೊಳಪಡಿಸಿಕೊಳ್ಳಲಾಗಿದೆ. ಮಾಚಿದೇವರ ವಚನಗಳನ್ನು ತಲಸ್ಪರ್ಶಿ ಅಧ್ಯಯನದೊಂದಿಗೆ ಅಭ್ಯಸಿಸಿ

ಅವುಗಳಲ್ಲಿ ಅಡಕಗೊಂಡಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮವನ್ನು, ತಾತ್ವಿಕ ಒಳನೋಟವನ್ನು ಗ್ರಹಿಸುವ ಉದ್ದೇಶ ಪ್ರಸ್ತುತ ನಿಬಂಧವಾಗಿದೆ. ಮಾಚಿದೇವರ ವಚನಗಳನ್ನು ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಲೇ, ಮಾನವನ ವ್ಯಕ್ತಿತ್ವ ನಿರ್ಮಾಣದಲ್ಲಿ ವಚನಗಳ ಮಹತ್ವ ಕುರಿತ ಅಧ್ಯಯನ ಇದಾಗಿದೆ. ಮಾಚಿದೇವರ ವಚನಗಳ ನೆಲೆ – ಬೆಲೆಯ ಚರ್ಚೆಯೊಂದಿಗೆ ಸೃಜನಶೀಲತೆಯ ವಿಸ್ತಾರತೆಯನ್ನು ಶೋಧನೆಗೊಳಪಡಿಸುವ ಉದ್ದೇಶವಿದೆ. ಪ್ರಸ್ತುತ ಸಮಾಜಕ್ಕೆ ಮಾಚಿದೇವರ ವಚನಗಳು ಎಷ್ಟು ಪ್ರಸ್ತುತವಾಗಿವೆ? ಎನ್ನುವುದನ್ನು ಗ್ರಹಿಸುತ್ತಾ, 'ನಡೆ' ಮತ್ತು 'ನುಡಿ'ಯಲ್ಲಿ ಯಾವುದೇ ವೈರುಧ್ಯವಿರಬಾರದು. ಬಾಯಿಯಲ್ಲಿ ಹೇಳುವುದಕ್ಕಿಂತಲೂ ಸ್ವತಃ ಆಚರಣೆಯಲ್ಲಿ ಹೇಗೆ ಅಳವಡಿಸಿಕೊಳ್ಳಬಹುದೆಂಬ ಮನೋಭಾವವನ್ನು ಕಂಡುಕೊಳ್ಳಬೇಕಾಗಿದೆ. ಇದಲ್ಲದೆ ಸಮಕಾಲೀನ ವಚನಕಾರರ ವಚನಗಳಲ್ಲಿಯೂ ಮಡಿವಾಳ ಮಾಚಿದೇವರ ವ್ಯಕ್ತಿ – ವ್ಯಕ್ತಿತ್ವದ ಅನಾವರಣವಿದೆ. ಬಸವಾದಿಯಾಗಿ ಇತರ ಶಿವಶರಣರು, ವಚನಕಾರರ ದೃಷ್ಟಿಯಲ್ಲಿ ಮಾಚಿದೇವರನ್ನು ವರ್ಣಿಸಿರುವುದನ್ನೂ ಪ್ರಸ್ತುತ ನಿಬಂಧದ ಅಧ್ಯಯನ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಅನ್ವಯಿಕ ಸಂಶೋಧನಾ ವ್ಯಾಪ್ತಿಯಲ್ಲಿ ಮಡಿವಾಳ ಮಾಚಿದೇವರ ವಚನಗಳನ್ನು ಮತ್ತು ಮಡಿವಾಳ ಮಾಚಿದೇವರನ್ನು ಕುರಿತಂತೆ ಇತರ ಸಮಕಾಲೀನ ವಚನಕಾರರು ವಿಶ್ಲೇಷಿಸುವ ಪರಿಕ್ರಮವನ್ನು ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯ ಚೌಕಟ್ಟಿನೊಳಗೆ ಅಧ್ಯಾಯಗಳನ್ನು ವಿಂಗಡಿಸಿಕೊಂಡು ಅಭ್ಯಸಿಸಲಾಗಿದೆ.

**ಅಧ್ಯಾಯ 1 ರ ಅಡಿ ಟಿಪ್ಪಣಿಗಳು :–**

1. 'ಬಸವೇಶ್ವರರ ಸಮಕಾಲೀನರು' ಕೃತಿಯ ಮುನ್ನುಡಿಯಲ್ಲಿ ಶ್ರೀಜಯಚಾಮರಾಜ ಒಡೆಯರ್‌ರವರು ಉದ್ಧರಿಸಿರುವುದು.
2. ಡಾ ॥ ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದ ಗೀತೆಗಳು, ಪುಟ 246.

## ಅಧ್ಯಾಯ – 2

# “ಮಾಚಿದೇವರ ಜನನ, ಪೌರಾಣಿಕ ಹಿನ್ನೆಲೆ, ಕಾಲ–ಇತಿವೃತ್ತಾಂತದ ಸಂಕ್ಷಿಪ್ತತೆ”

ಮರ್ತ್ಯದ ಮನದ ಮೈಲಿಗೆಯನ್ನು ಕಳೆಯಲೆಂದು ಜನಿಸಿದ ಮಾಚಿದೇವರ ಜನನ ಕುರಿತಂತೆ ಹಲವು ಕವಿಗಳು, ವಿದ್ವಾಂಸರು ವಿಭಿನ್ನರೀತಿಯ ಮಾಹಿತಿಯನ್ನು ದಾಖಲಿಸುತ್ತಾರೆ. ಸತ್ಯ, ನ್ಯಾಯ, ನಿಷ್ಠೆಗಳಿಗೆ, ಕಾಯಕನಿಷ್ಠೆಗೆ, ನಿರಂಹಕಾರ ಸುಜ್ಞಾನಶೀಲತೆಗೆ, ವೀರತ್ವಕ್ಕೆ ಬದ್ಧವಾದ ಮಡಿವಾಳ ಮಾಚಿದೇವರ ಬಗ್ಗೆ, ಶಿವಭಕ್ತರ ಬಗೆಗೆ, ಶಿವಶರಣರ ಬಗೆಗೆ, ರಗಳೆಗಳನ್ನು ರಚಿಸಿರುವ 'ರಗಳೆಗಳ ಕವಿ' ಹರಿಹರನು ತನ್ನ ರಗಳೆಗಳಲ್ಲಿ ಯಾವುದೇ ಪ್ರಸ್ತಾಪ ಮಾಡಿಲ್ಲ. ಆದರೆ “ವೀರಶೈವ ಪುರಾಣಗಳಾದ ಭೀಮಕವಿಯ 'ಬಸವಪುರಾಣ', 'ಪ್ರಭುದೇವರ ಪುರಾಣ', 'ಚತುರಾಚಾರ್ಯ ಪುರಾಣ', 'ವೀರಶೈವಾಮೃತ ಮಹಾಪುರಾಣ', 'ಗುರುರಾಜ ಚಾರಿತ್ರ್ಯ', 'ಅಮರಗಣಾಧೀಶ್ವರ ಚರಿತ', 'ಭೈರವೇಶ್ವರ ಕಾವ್ಯಕಥಾ ಸೂತ್ರ ರತ್ನಾಕರ, 'ಶಿವತತ್ವ ಚಿಂತಾಮಣಿ', ಶರಣಲೀಲಾಮೃತಗಳಲ್ಲಿ ಮಾಚಯ್ಯನ ಕುರಿತು ಪ್ರಸ್ತಾಪವಿದೆ.” [1]

ಇದಲ್ಲದೆ, “ಕರಸ್ಥಲದ ನಾಗಿದೇವನ 'ಮಡಿವಾಳ ಮಾಚಯ್ಯಗಳ ತಾರಾವಳಿ', ಅಜ್ಞಾತಕವಿಕೃತ ವೀರಭದ್ರಾವತಾರ ಮಡಿವಾಳ ಮಾಚಯ್ಯಗಳ ಎಂಬ ಎರಡು ಕೃತಿಗಳು ಲಭ್ಯವಾಗಿವೆ.”[2] ಜನಪದ ಕವಿಗಳೂ ಕೂಡ ಮಾಚಯ್ಯನ ಜನನದ ಬಗ್ಗೆ ತಮ್ಮ ತ್ರಿಪದಿಗಳಲ್ಲಿ ಪ್ರಸ್ತಾಪಿಸುತ್ತಾರೆ.

“ಹಿಪ್ಪರಗಿ ಮೆರೆಯುತಲಿ ಉಪ್ಪರಿಗೆ ಆಗೆಂದು
ತುಪ್ಪದ ಹೊಳೆಯಾಗಿ ಹರಿಯುತಲಿ!
ಊರೊಳಗೆ ಅಪ್ಪ ಮಾಚಣ್ಣ ಜನಿಸಿದನು.”[3]

**ಪೌರಾಣಿಕ ಹಿನ್ನೆಲೆ – ಕಾಲಚರ್ಚೆ:–**

ಮಡಿವಾಳ ಮಾಚಿದೇವರ ಜನನ ವೃತ್ತಾಂತಕ್ಕೆ ಸಂಬಂಧಪಟ್ಟಂತೆ ಪೌರಾಣಿಕ ಹಿನ್ನೆಲೆಯ ದೃಷ್ಟಿಯಲ್ಲಿ ಒಂದಷ್ಟು ಮಾಹಿತಿಗಳು ಕಾಣಸಿಗುತ್ತವೆ. ಮಹಾಮಹಿಮರ, ಮಹಾತ್ಮರ ಜನ್ಮವೃತ್ತಾಂತವು ಜನ್ಮಾಂತರ ಕಥೆಗಳೆಂಬಂತೆಯೇ ಚಿತ್ರಿಸಲಾಗುತ್ತದೆ. ಮಡಿವಾಳ ಮಾಚಿದೇವರು ವೀರಭದ್ರನ ಅವತಾರವೆಂದೂ, ಕೈಲಾಸದಲ್ಲಿ ಘಟಿಸಿದ ಘಟನೆಯಿಂದಾಗಿ ಭೂಲೋಕದಲ್ಲಿ ಜನಿಸಿದರೆಂದೂ ಪೌರಾಣಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗುತ್ತಿದೆ. ದಕ್ಷಯಾಗ ಧ್ವಂಸಕ್ಕೆ ತೆರಳಿ ವಿಜಯಿಯಾಗಿ ಹಿಂದಿರುಗಿ ಕೈಲಾಸಕ್ಕೆ ವೀರಭದ್ರನು ನಿಸ್ಸಾಳ, ಭೇರಿ, ತಮ್ಮಟೆ, ಕಹಳೆ ಮುಂತಾದ ವೀರ ವಾದ್ಯಗಳ ಘನ ಧ್ವನಿಯೊಂದಿಗೆ ಪರಶಿವನ ಒಡ್ಡೋಲಗಕ್ಕೆ ಹರ್ಷದಿಂದ ಆಗಮಿಸುತ್ತಾನೆ. ವಿಜಯೋತ್ಸಾಹದ ಉನ್ಮಾದಲ್ಲಿದ್ದ ವೀರಭದ್ರನಿಂದ ಅಚಾತುರ್ಯವೊಂದು ಘಟಿಸುತ್ತದೆ. ಶಿವನ ಸಭೆಗೆ ವಿಜಯೋನ್ಮಾದದಿಂದ ಪ್ರವೇಶಿಸುವಾಗ ವೀರಭದ್ರನ ಮೈಮೇಲಣ ಉತ್ತರೀಯದ ಸೆರಗು ಶಿವಸಭೆಯಲ್ಲಿ

ಹಳಿತಿದ್ದ ಶರಣರ ಮೇಲ್ಸಾಯ್ದು ಸರಿಯುತ್ತದೆ. ನ್ಯಾಯನಿಷ್ಠ ಮತ್ತು ನಿರ್ಮೋಹಿಯಾದ ಪರಶಿವನು ಮಗನಾದ ವೀರಭದ್ರನ ವಿಜಯೋತ್ಸಾಹವನ್ನು ಕಂಡು ಸಂತುಷ್ಟನಾದರೂ ಪುತ್ರನಿಂದ ಶರಣರಿಗಾದ ಅಪಚಾರದ ಪ್ರಾಯಶ್ಚಿತ್ತಕ್ಕಾಗಿ ಭೂಲೋಕದಲ್ಲಿ ಜನಿಸಿ. ಶಿವಶರಣರ ವಸ್ತ್ರವನ್ನು ಮಡಿಮಾಡಬೇಕೆಂದೂ ಆಜ್ಞಾಪಿಸುತ್ತಾನೆ.

"ಮರುಳತನದ ವೀರದಕ್ಷನ ಸಂಹರಿಸಿ
ಬರುತಿರೆ ಕೈಲಾಸಪುರಕೆ
ಶರಣರ ಮೇಲೆ ಶೆರಗು ಸೋಂಕಲದ ಕಂಡು
ಪುರಹರನಿಳೆಗೆ ಪೋಗೆನಲು

ನಿಮ್ಮ ಶಾಪವ ಭಯವನ್ನೇಸುದಿನವೀಗ
ಎನ್ನುತೀಶ್ವರನ ಕೇಳಿದರೆ
ಚಿನ್ಮಯ ಶರಣರ ವಸ್ತ್ರವ ತೊಳೆಯಲು
ಇನ್ನು ಹಿಂಗುವುದು ನಿಮ್ಮ ದೋಷ

ಕರ್ತನ ನುಡಿ ಕೇಳಿ ಮರ್ತ್ಯಕ್ಕಿಳಿದನಾಗ
ವಸ್ತ್ರವ ತೊಳೆವಾ ಭರದಲ್ಲಿ
ಕರ್ತೃ ಬಸವರಾಜನೆಡೆಗೆ ನೆಡೆದು ಬಂದು
ವಿಸ್ತಾರದಲಿ ನಿಂದನಾಗ"[4]

ಮಡಿವಾಳ ಮಾಚಿದೇವರು ವೀರಭದ್ರನ ಅಪರಾವತಾರವೆಂದೂ ಪುಷ್ಟೀಕರಿಸುವಂತೆ ಸಿದ್ಧನಂಜೇಶ ಕವಿಯ "ಗುರುರಾಜ ಚಾರಿತ್ರ" ಮತ್ತು "ಮಾಚಿದೇವರ ಮನೋವಿಲಾಸ" ಕೃತಿಯಲ್ಲೂ ಹೇಳಲಾಗಿದೆ.

"ನಮಃ ಶ್ರೀ ಗುರು ರೂಪಾಯ ಮಾಚಿದೇವಾಯ ಯೋಗಿನೇ!
ವೀರಭದ್ರಾವತಾರಾಯ ವೀರಾಚಾರ ಪ್ರವರ್ತಿನೇ" [5]

ಕೆಲವು ವಿದ್ವಾಂಸರು, ಕವಿಗಳು, ವಚನಕಾರರು ತಮ್ಮ ಕೃತಿಗಳಲ್ಲಿ ಕೆಲವೊಮ್ಮೆ ಮಾಚಯ್ಯ, ಮಾಚಿದೇವ, ಎಂದೂ ಸಂಬೋಧಿಸಿರುವುದನ್ನು ಗಮನಿಸಬೇಕು, ಹಲವರು ಅಭಿಮಾನದಿಂದ 'ಮಾಚಿತಂದೆ' ಎಂದೂ ಕರೆಯುವುದು ನಿಜಕ್ಕೂ ಮಾಚಯ್ಯನವರ ಘನತೆಗೆ ತಕ್ಕುದಾಗಿದೆ.

ಇದಲ್ಲದೇ, ಜನಪದ ತ್ರಿಪದಿ ರಚನಕಾರರೂ ಕೂಡ ಮಡಿವಾಳ ಮಾಚಯ್ಯ ವೀರಭದ್ರನ ಅವತಾರಿಯಾಗಿ ಭೂಲೋಕದಲ್ಲಿ ಜನಿಸಿದ್ದಾನೆ. ಬಸವೇಶ್ವರರು ಜನಿಸಿದ ಬಾಗೇವಾಡಿಯ ಉತ್ತರ ದಿಕ್ಕಿನಲ್ಲಿ ಹದಿನೆಂಟು

ಮೈಲಿಗಳ ದೂರದಲ್ಲಿಯೂ, ಬಿಜಾಪುರ ಪಟ್ಟಣದ ಪೂರ್ವದಿಕ್ಕಿನಲ್ಲಿ ಇಪ್ಪತ್ತೆರಡು ಮೈಲಿಗಳ ದೂರದಲ್ಲಿನ ಹಿಪ್ಪರಗಿ ಗ್ರಾಮದಲ್ಲಿ ಜನಿಸಿರುವನೆಂದೂ ವ್ಯಾಖ್ಯಾನಿಸಿದ್ದಾರೆ.

"ವೀರಭದ್ರನೆ ಅಂದು ವೀರ ಮಡಿವಾಳನಾಗಿ

ಸಾರುತಲಿ ವೀರಧರ್ಮವನೆ! ಜಗಕೆಲ್ಲ

ತೋರಿದನು ಮುಕ್ತಿಮಾರ್ಗವನು"

"ಹಿಪ್ಪರಗಿ ಶರಣನಿಗೆ ತಪ್ಪದಲೆ ಬಾಗುವೆವು

ಮುಪ್ಪಾಗದಿರಲಿ ನಮ್ಮೊಡ! ಮಾಚಯ್ಯ

ಅಪ್ಪಿ ಹಾದಿಯನು ತೋರಿಸಲಿ"[6]

ಮಾಚಯ್ಯ ಜನಿಸಿದ ಹಿಪ್ಪರಗಿ ಗ್ರಾಮವನ್ನು 'ಕಲಿದೇವರ ಹಿಪ್ಪರಿಗೆ' ತದನಂತರದಲ್ಲಿ 'ದೇವರ ಹಿಪ್ಪರಗೆ' ಎಂದೂ ಕರೆಯಲಾಗುತ್ತದೆ. ಕರಸ್ಥಲದ ನಾಗಿದೇವನು ತನ್ನ ಮಡಿವಾಳ ಮಾಚಿ ತಂದೆಗಳ ತಾರಾವಳಿಯಲ್ಲಿ "ಕನ್ನಡದ ಹಿಪ್ಪಲಿಯ ಪುರದೊಳು ಬಂದಿಳಿದನು, ಧಾರುಣಿಗಧಿಕವಾದ ಹಿಪ್ಪಲಿಯ ಪುರದೊಳು ವೀರಶೈವಾಚಾರ ಕ್ರಿಯಾದಂಪತಿಗಳ ಮಗನಾಗಿ ಜನಿಸಿದ ಮಾಚಯ್ಯ"[7] ಎಂದೂ ತಿಳಿಸುತ್ತಾನೆ. ಅಲ್ಲದೆ, ಭೈರವೇಶ್ವರ ಕಾವ್ಯದ 'ಕಥಾ ಮಣಿ ಸೂತ್ರರತ್ನಾಕರ'ದಲ್ಲಿ ವಸುಧೆಗಧಿಕ ಮಾಗಿಪ್ಪ ಹಿಪ್ಪಲಿಗೆ ಪುರದಲ್ಲಿ ವೀರಶೈವಾಚಾರ ದಂಪತಿಗಳು ರಜತಕಾಯಕದಿಂದಲವರಿಗೆ ಮಡಿವಾಳಯ್ಯ ಮಗನಾಗಿ ಜನಿಸಿದ"[8] ನೆಂದು ವ್ಯಾಖ್ಯಾನಿಸುತ್ತಾರೆ. ಶರಣಲೀಲಾಮೃತ ಕೃತಿಯಲ್ಲಿ ಮಾಚಯ್ಯನವರ ತಂದೆ ಪರುವತಯ್ಯನೆಂದು ಉಲ್ಲೇಖಿಸಿದರೂ ತಾಯಿಯ ಬಗ್ಗೆ, ವಂಶ ವಿಚಾರಗಳ ಬಗ್ಗೆ ಉಲ್ಲೇಖವಿಲ್ಲ. ಆದರೆ ತಾಯಿ ಸುಜ್ಞಾನವ್ವಳೆಂದೂ ಕುಲದೈವರಾದ 'ಕಲಿದೇವರು' ಅಥವಾ 'ಕಲಿನಾಥಸ್ವಾಮಿಯ' ದೈವವನ್ನು ಆರಾಧಿಸುತ್ತಿದ್ದರೆನ್ನುವ ವಿಚಾರಗಳು ಸಂಶೋಧನೆಯಿಂದ ತಿಳಿದು ಬರುತ್ತವೆ. ಮಾಚಯ್ಯನ ಗುರುಗಳಾಗಿ ಶಿವಲೀಲಾಮೃತದಲ್ಲಿ ಉಲ್ಲೇಖಿಸುವಂತೆ 'ಚನ್ನಮಲ್ಲಿಕಾರ್ಜುನ ವರಮಂತ್ರ ಪಿತ್ ಪಿಂಡ ವೈಕಾರಿತ್ರದಲಿ ಜನಿಸಿದ ಮಾಯಾ ಶಿಶು"[9] ಎಂದು ಹೇಳಿ ಮಾಚಯ್ಯನ ಅಧ್ಯಾತ್ಮಗುರುಗಳು ವೇದಶಾಸ್ತ್ರ, ವಿದ್ಯೆ ಕಲಿಸಿದವರು ಮಲ್ಲಿಕಾರ್ಜುನ ಸ್ವಾಮಿಗಳೆಂದು ತಿಳಿದುಬರುತ್ತವೆ.

ಮಡಿವಾಳ ಮಾಚಯ್ಯನವರು ಕಾಲ ನಿರ್ಣಯಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಕವಿ ಚರಿತೆಕಾರರು 'ಕರ್ನಾಟಕ ಕವಿ ಚರಿತ್ರೆಯ, 1ನೇ ಸಂಪುಟದಲ್ಲಿ ಸುಮಾರು ಕ್ರಿ.ಶ. 1160 ಎಂದು ತಿಳಿಸುತ್ತಾರೆ. ಆದರೆ ಬಸವಣ್ಣನವರ ಕಾಲ ಕ್ರಿ.ಶ. 1131 ಎಂದು ಚರಿತ್ರೆಕಾರರು ಉಲ್ಲೇಖಿಸಿರುವುದರಿಂದ, ಮಾಚಯ್ಯನವರು ಬಸವಣ್ಣನವರ ಸಮಕಾಲೀನರಾಗಿರುವುದರಿಂದಲೂ ಕ್ರಿ.ಶ. 1160 ಎನ್ನುವುದು ಸಮಂಜಸವಾದ ಕಾಲ ನಿರ್ಣಯವಾಗುವುದಿಲ್ಲ. ಸಂಶೋಧನಾ ದೃಷ್ಟಿಯಿಂದ ಮಡಿವಾಳ ಮಾಚಿದೇವರ ಕಾಲನಿರ್ಣಯದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಯ ಅಗತ್ಯತೆಯಿದೆ ಎನ್ನಲು ಅಡ್ಡಿಯಿಲ್ಲ. ಮಾಚಯ್ಯನವರ ವಿವಾಹಕ್ಕೆ

ಸಂಬಂಧಪಟ್ಟಂತೆ, ವೈಯಕ್ತಿಕ ದಾಂಪತ್ಯ ಜೀವನಕ್ಕೆ ಸಂಬಂಧಿಸಿದಂತೆ ಹಂತಿಯ ಹಾಡೊಂದರಲ್ಲಿ ಉಲ್ಲೇಖ ಮಾತ್ರವೇ ವಿನಃ ಬೇರೆ ಯಾವುದೇ ಪುರಾಣ, ಪುಣ್ಯಕತೆ, ವಚನಗಳಲ್ಲಿ ಮುಂತಾದವುಗಳಲ್ಲಿ ಎಲ್ಲಿಯೂ ಕಿಂಚಿತ್ತೂ ಮಾಹಿತಿ ದೊರೆಯುವುದಿಲ್ಲ.

ಮಡಿವಾಳ ಮಾಚಯ್ಯನವರು ದೇವರ ಹಿಪ್ಪರಿಗೆಯಿಂದ ಕಲ್ಯಾಣದ ಪಟ್ಟಣಕ್ಕೆ ಪ್ರವೇಶಿಸಿ ರಜಕ ವೃತ್ತಿಯನ್ನು ಕೈಗೊಳ್ಳುತ್ತಾರೆ. ಅಂದಿನ ಬಿಜ್ಜಳ ರಾಯನ ಕಲ್ಯಾಣವನ್ನೂ, ಬಸವಾದಿ ಶಿವಶರಣರಿದ್ದ ಕಲ್ಯಾಣವನ್ನು, ಇಡೀ ಕಲ್ಯಾಣದ ಚಿತ್ರಣವೊಂದನ್ನು ಸ್ವಯಂ ಮಾಚಯ್ಯನವರೇ ತಮ್ಮ ವಚನವೊಂದರಲ್ಲಿ ಹೀಗೆ ವರ್ಣಿಸುತ್ತಾರೆ –

"ಹೋಗಬಾರದು ಕಲ್ಯಾಣವನಾರಿಗೆಯೂ
ಹೊಕ್ಕಡೇನು? ಕಲ್ಯಾಣದ ಸ್ಥಾನಮಾನಂಗಳನರಿಯಬಾರದು
ಕಲ್ಯಾಣದ ಕಡೆಯಕಾಣಬಾರದು
ಕಲ್ಯಾಣದೊಳಗೆ ಹೊಕ್ಕಹೆನೆಂದು
ಕಲ್ಯಾಣ ಚರಿತ್ರೆರಾದೆವೆಂದು
ದೇವದಾನವ ಮಾನವರೆಲ್ಲರೂ ಭಾವಿಸುತ್ತಿರ್ದರು ನೋಡಾ!

ಕಲ್ಯಾಣವನು ಅನಂತಮೂರ್ತಿಗಳು
ಅನಂತಸ್ಥೂಲಮೂರ್ತಿಗಳು ಅನಂತ ಸೂಕ್ಷ್ಮಮೂರ್ತಿಗಳು
ಅನಂತ ಮಂತ್ರಧ್ಯಾನರೂಪರು ಪುಣ್ಯಕ್ಕೆ ಅಭಿಲಾಷೆಯ ಮಾಡುವರು
ಪೂಜಿತರು ಯೋಗಿಗಳು ಭೋಗಿಗಳು
ದ್ವೈತರು ಅದ್ವೈತರು ಕಾಮಿಗಳು ನಿಷ್ಕಾಮಿಗಳು ಆಶ್ರಿತರು
ಅದೆಂತು ಹೋಗಬಹುದಯ್ಯ ಕಲ್ಯಾಣವನು?
ಅದೆಂದು ಕಾಣಬಹುದಯ್ಯ ಕಲ್ಯಾಣವನು, ಲಿಂಗ ವೃಷ್ಟಂಗಲ್ಲದೆ?
ಲಿಂಗವೇದ್ಯಂಗಲ್ಲದೆ? ಲಿಂಗ ಗಂಭೀರಂಗಲ್ಲದೆ?
ಪ್ರಸಾದ ಕುಳಾನ್ವಯಂಗಲ್ಲದೆ?
ಆಶೆಗೆಡೆಗುಡದಿಪ್ಪುದೆ ಕಲ್ಯಾಣ
ಸರ್ವಾಂಗವರ್ಣವಳಿದು ಕುಲಮದ ತಲೆದೋರದೆ
ಭಕ್ತಿನಿತ್ಯವಾದುದೆ ಕಲ್ಯಾಣ

ಈ ಕಲ್ಯಾಣವೆಂಬ ಮಹಾಘನದೊಳಗೆ

ಬಸವಣ್ಣನು ನಾನು ಕೂಡಿ ಹದುಳಿರ್ದೆವು ಕಾಣಾ ಕಲಿದೇವಯ್ಯ"[10]

ಮಹಾನುಭಾವರಾದ ಬಸವಣ್ಣನೊಡನೆ ಹಲವು ಕಾಲ ಒಡನಾಟವಾದ ಬಳಿಕ ಈ ವಚನವನ್ನು ಮಾಚಯ್ಯನವರು ರಚಿಸಿರುವಂತೆ ಕಂಡು ಬಂದರೂ ಮಾಚಯ್ಯನವರು ಕಲ್ಯಾಣ ಪಟ್ಟಣವನ್ನು ಪ್ರವೇಶಿಸುವುದಕ್ಕೆ ಮುಂಚೆ ಕಲ್ಯಾಣವು ದೈವಭಕ್ತರ, ದುರಾಚಾರರಹಿತರ, ವರ್ಣಭೇದವೆಣಿಸದವರ, ಕುಲಮದವಿಲ್ಲದವರ, ಸುಸಂಸ್ಕೃತಿಯುಳ್ಳ ಸಂಪನ್ನ ಆವಾಸಸ್ಥಾನವಾಗಿದ್ದತೆಂಬುದನ್ನು ಈ ವಚನದಿಂದ ಸುಸ್ಪಷ್ಟವಾಗುತ್ತದೆ. ಕಲ್ಯಾಣ ಪಟ್ಟಣದ ಭಕ್ತಿಭಾಗ್ಯದ ವೈಭವವನ್ನೂ, ಸಿರಿ ಶೃಂಗಾರಗಳನ್ನು ದಾರಿಯುದ್ದಕ್ಕೂ ಶರಣರ, ಅನುಭಾವಿಗಳ ದರ್ಶನ, ಸ್ಪರ್ಶನ, ಸಂಭಾಷಣೆಗಳನ್ನು ಕಂಡು ಕೇಳಿ ಆನಂದ ತುಂದಿಲಚಿತ್ತರಾಗಿ ಎಲ್ಲಕ್ಕಿಂತ ಮಿಗಿಲಾಗಿ ಇದಕ್ಕೆಲ್ಲ ಮೂಲವಾದ ಬಸವಣ್ಣನವರ ಕೀರ್ತಿಯನ್ನು ಕೊಂಡಾಡುತ್ತಾರೆ. ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳನು ಚಾಡಿಕೋರರ ಮಾತಿಗೆ ತಲೆದೂಗಿ ಮಾಚಯ್ಯನವರ ಕಾಯಕಕ್ಕೆ ಎಲ್ಲಿಯೂ ನೀರು, ಒಗೆಯುವ ಕಲ್ಲು ದೊರೆಯದಂತೆ, ಪಟ್ಟಣದ ಎಲ್ಲಾ ಕೆರೆ, ನದೀತೀರ, ಕಾಲುವೆಗಳಿಗೆ ರಾಜಭಟರನ್ನು ಕಾವಲಿರಿಸುತ್ತಾನೆ. ಈ ಸಂದರ್ಭದಲ್ಲಿ ಮಾಚಯ್ಯನವರು ಶರಣರ ಉಡಿಗೆಯ ಮಡಿಗಾಗಿ ಎಲ್ಲಿಯೂ ನೀರು ಸಿಕ್ಕದಿರುವಾಗ ತನ್ನ ಧರ್ಮಪತ್ನಿ ಮಲ್ಲಿಗವ್ವನೊಂದಿಗೆ ಚರ್ಚಿಸುತ್ತಾನೆ. "ಸತಿ–ಪತಿಗಳೊಂದಾದ ಭಕ್ತಿ ಶಿವಂಗೆ ಹಿತವಪ್ಪುದು" ಎನ್ನುವಂತೆ ಕಾಯಕತತ್ವಕ್ಕೆ ಹೆಚ್ಚು ಮನ್ನಣೆ ನೀಡುವ ಮಾಚಯ್ಯನವರ ಕಾಯಕ ಧರ್ಮದಲ್ಲಿ ಧರ್ಮಪತ್ನಿಯದು ಸಮಪಾಲು. ತನ್ನ ಕುಲ ಮತ್ತು ಕಾಯಕದ ಬಗ್ಗೆ ಮಾಚಯ್ಯನವರೆ ತಮ್ಮ ವಚನವೊಂದರಲ್ಲಿ ಹೀಗೆ ಬೆಳಕು ಚೆಲ್ಲುತ್ತಾರೆ.

"ಎಲ್ಲಾ ಮಹಾಗಣಂಗಳು ಎನ್ನ ಹೊಳೆಯಲ್ಲಿ ಹಾಯುವರು

ಲಿಂಗದ ವಸ್ತ್ರವನ್ನೊಗೆದು ಕಾಯಕದಲ್ಲಿ ಶುದ್ಧನಾದೆನು

ಎನ್ನ ಕಾಯಕವ ಅವಧರಿಸು ಕಲಿದೇವಯ್ಯಾ"[11]

ಕಲ್ಯಾಣದಲ್ಲಿ ಮಹಾಶರಣ ವಸ್ತ್ರಗಳನ್ನು ಮಡಿಮಾಡುವ ಸಂದರ್ಭದಲ್ಲೇ ಬಿಜ್ಜಳನಿಂದ ಕಾಯಕ ನಿರ್ವಹಣೆಗೆ ಅಡ್ಡಿಯಾದಾಗ ಮಡದಿಯು ಎದೆರಕುತದಲ್ಲಿಯೇ ಕಾಯಕವನ್ನು ಪೂರ್ಣಗೊಳಿಸಿದ ಪರಿ ನಿಜಕ್ಕೂ ಅಚ್ಚರಿ ತರುವಂತಹುದು. ಕಾಯಕ ನಿಷ್ಠೆಗೆ 'ಹಂತಿಯ ಹಾಡಿನ' ಉಲ್ಲೇಖಕ್ಕಿಂತಲೂ ಮತ್ತೊಂದು ಅರ್ಥಗರ್ಭಿತವಾದ ನಿದರ್ಶನ ಸಿಕ್ಕುವುದಿಲ್ಲ.

"ಮಡಿಯನು ಕರಕೊಂಡು ಕಡುಭಕ್ತ ಮಾಚಯ್ಯ

ಬಿಡದೆ ತಿರುಗಿದನು ಕೆರೆ ತೊರೆಯ! ಕಾವಲಿಯು

ನಡೆದಿತ್ತು ಎಲ್ಲಿ ಹೋದಲ್ಲಿ.

ಹೊತ್ತು ಮುಣುಗುತ ಬಂತು ಬತ್ತಲೆಯ ಜಗಕೆಲ್ಲ

ಸತ್ತನಂದಿಂದು ಹಸಿಯಾತು! ಕಾಯಕದ
ಬುತ್ತಿ ತೀರಿತ್ತೈ ಈ ದಿನಕೆ

ಮಾಚಯ್ಯನಾ ಮಡದಿ ಸೂಚನೆಯನೀಯುತಲಿ
ಯಾಚನೆಯು ಬೇಡ ಪತಿದೇವ! ನೀನೆನ್ನ
ನಾಚಲದೆ ಹಿಂಡು ಎದೆರಗುತ

ಊರ ಮುಂದಿನ ಸರವು ಯಾರ ಸುಳಿವೇ ಇಲ್ಲ
ನೀರು ಸಿಗದಿನ್ನು ಪತಿದೇವ! ಎದೆರಗುತ
ನೀರಲರಿವೆಗಳ ತೊಳೆದ್ಹಾಕು

ಹಡದಿ ಹಾಸಿದ ಮಾಚ ಮಡಿದಿಯೆದೆ ತಾಕೊಯ್ದು
ಬಡನೆ ಬಲು ಚಿಮ್ಮಿ ಬಿಸಿರಗುತ! ಹೊಳೆಯಾಗಿ
ಮಡುಗಟ್ಟಿ ನೀರ ಕೆರೆಯಾತು

ನೀರ ಕಾಣುತ ಮಾಚ ತೀರಿಸಿದ ಕಾಯಕವ
ಆರಿಸರಿವೆಗಳ ಮಡಿಮಾಡಿ! ಕೂಗಿದನು
ಬಾರೆ ಸಂಗಡತಿ ತಡವಾತು

ಮಡಿವಾಳ ಮಾಚಯ್ಯ ಧೃಡವುಳ್ಳ ಶಿವಭಕ್ತ
ಮಡಿಯನು ಕೊಂದು ರಗುತದಲಿ! ತಾತೊಳೆದ
ಒಡೆಯನೊಸ್ತಿರವ ಭಕುತಲಿಯಲಿ

ಪತಿಯ ಕಾಯಕ ಸೇರಿ ಮತಿವಂತಿ ಎದೆಗೊಟ್ಟು
ಗತಿಯ ಹೊಂದಿದಳು ಸಗ್ಗದಲಿ! ಶಿವಗಣವು
ಅತಿನುತಿಸಿ ಮಾನ ಸಲ್ಲಿಸಿತು.

ಮುತ್ತೈದಿ ನಿನ ಮರಣ ಎತ್ತ ಹೋದರು ಪೂಜೆ
ಕತ್ತೂರಿನಾತವಿದ್ದಂತೆ! ಜಗದೊಳಗೆ
ಉತ್ತಮರ ಮನಕೆ ಕಾಯಕವು"[12]

ಉದ್ಯೋಗಗಳಲ್ಲಿ ಮೇಲು, ಕೀಳುಗಳೆಂಬ ತಾರತಮ್ಯ ಭಾವನೆಯಿಲ್ಲದೆ 'ಔದ್ಯೋಗಿಕ ಸಮಾನತೆಯ ತತ್ವ'ವನ್ನು ಪ್ರಜೆಗಳಲ್ಲಿ ಪ್ರಸಾರಗೊಳಿಸಿದ ಮಾಚಯ್ಯನವರು ವಿದ್ವಾಂಸರಾಗಿದ್ದರೂ ಮಹತ್ತರ ಮನೋಭಾವದಿಂದಲೇ ಮಡಿವಾಳ ವೃತ್ತಿಯನ್ನು ಕೈಗೊಂಡರು. ಅಗಸನ ಉದ್ಯೋಗವು ಕನಿಷ್ಠ, ಇತರ ಉದ್ಯೋಗಗಳು ಶ್ರೇಷ್ಠವೆನ್ನುವ ತಪ್ಪು ಭಾವನೆಯನ್ನು ಪ್ರಜಾವರ್ಗದಿಂದ ನಿರ್ಮೂಲನೆಗೊಳಿಸುವುದೇ ಮಾಚಿದೇವರ ಕಾಯಕದ ಮೂಲೋದ್ದೇಶವಾಗಿತ್ತು.

ಮಡಿವಾಳ ಮಾಚಯ್ಯನವರನ್ನು ಕುರಿತಂತೆ, ಅನೇಕ ಶಾಸನಗಳೂ ರಚಿತಗೊಂಡಿರುವುದೂ ಶಿವಶರಣರನೊಬ್ಬನ ಬಗೆಗಿನ ಮಹತ್ವವನ್ನು ಮತ್ತು ಮಹೋನ್ನತಿಯನ್ನು ಪ್ರಚುರಪಡಿಸುತ್ತದೆ. 12ನೇ ಶತಮಾನದ ವಚನಕಾರನೊಬ್ಬನನ್ನು ಕುರಿತ ಶಾಸನಪಾಠಗಳೂ ಕೇವಲ ಶರಣೊಬ್ಬನ ವ್ಯಕ್ತಿ- ವ್ಯಕ್ತಿತ್ವದ ನಿರ್ಮಾಣದ ಆಕರಗಳು ಮಾತ್ರವಲ್ಲದೇ ಸಮುದಾಯವೊಂದರ ಅಧ್ಯಯನಕ್ಕೂ ಪೂರಕ ದಾಖಲೆಗಳಾಗಿ ಸಹಾಯಕವಾಗುತ್ತವೆ. ಕಲ್ಯಾಣದ ತ್ರಿಪುರಾಂತಕ ಕೆರೆಯ ಬಳಿಯಲ್ಲಿ ಸಿಕ್ಕಿದ ಕ್ರಿ.ಶ. 1160ರ ಕಾಲದ ಶಾಸನದ ಪಾಠ ಹೀಗಿದೆ-

"ಸ್ವಸ್ತಿ ಶ್ರೀಮತ್ ತ್ರೈಳೋಕಮ

ಲ್ಲದೇವನ ಮಡಿವಾಳ ಬಸವಶ್ರೀ

ತ್ರಿಪುರಾಂತಕ ದೇವರ ಮಡಿವಾಳ

ಮಾಕಯ್ಯಂಗೆ ಅಚ(ಚಂ)ದ್ರಾರ್ಕ

ವರಂ ಬಿಟ್ಟ ಶಾಸನ"[13]

ಈ ಶಾಸನಪಾಠವನ್ನು ಗ್ರಹಿಸಿದರೆ (3ನೇ ತೈಲಪ) ತ್ರೈಲೋಕ್ಯಮಲ್ಲದೇವನಿಂದ (1152-67) ಮಡಿವಾಳ ಮಾಚಯ್ಯನು ದಾನ ಪಡೆದನೆಂಬ ಅಭಿಪ್ರಾಯ ವ್ಯಕ್ತವಾಗುತ್ತದೆ. ದಾನ ಸ್ವೀಕಾರವು ಶರಣಧರ್ಮಕ್ಕೆ ವಿರುದ್ಧವಾಗಿರುವುದರಿಂದ ಶಾಸನ ಪಾಠದಲ್ಲಿರುವ ಮಾಕಯ್ಯನು, ಮಾಚಯ್ಯನಲ್ಲವೆಂದು ಡಾ ॥ ಎಂ. ಎಂ. ಕಲುಬುರ್ಗಿಯವರು ತಮ್ಮ "ಶಾಸನಗಳಲ್ಲಿ ಶಿವಶರಣರು" ಕೃತಿಯಲ್ಲಿ ಅನುಮಾನವನ್ನು ವ್ಯಕ್ತಪಡಿಸುತ್ತಾರೆ.

ಕ್ರಿ.ಶ. 1284ರ ಅಮ್ಮಿನಬಾವಿಯ ಪಂಚಗೃಹ ಹಿರೇಮಠದ ಹಿತ್ತಲಲ್ಲಿ ಒಂದು ಬಾವಿ ಮತ್ತು ಸಮೀಪಕ್ಕೆ ಒಂದು ಚಿಕ್ಕ ಗುಡಿ ಇದ್ದು, ಇದನ್ನು 'ಗೌಳಿ ಗುಡಿ' ಎಂದೂ ಕರೆಯುತ್ತಾರೆ. ಈ ಗೌಳಿಗುಡಿಯ ಗೋಡೆಗೆ ಆನಿಸಿ ಶಾಸನವೊಂದು ಇಡಲ್ಪಟ್ಟಿದ್ದು, ಒಂದು ತ್ರುಟಿತ ವಿಗ್ರಹ ಮತ್ತು ಕೆಳಗಡೆ ಮೂರು ಸಾಲುಗಳ ಶಾಸನವಿದ್ದು, ಮಾಚಿದೇವನ ವಿಗ್ರಹವೂ ಇದೆ.

ಕ್ರಿ.ಶ. 1284ರ ಅಮ್ಮಿನ ಬಾವಿಯ ಶಾಸನ ಪಾಠ ಹೀಗಿದೆ:

"1. ತಾರಣ ಸಂವತ್ಸರದ ವೈಶಾಖ ಸು 15 ಆಲು ಅಂಮೆನಭಾ (ವಿ)-

2. ಯಲಿ ಮಡಿವಾಳರು ವೀರ ಮಡಿವಾಳ ಮಾಚಿ......

2. [ಯುಗ] ಪ್ರತಿಷ್ಟೆಯಂ [ಮಾಡಿ]ದರು [11+] ಮಂಗ[ಳ ಮಹಾ ಶ್ರೀಶ್ರೀಶ್ರೀ]"[14]

ಅಮ್ಮಿನಬಾವಿಯ ಶಾಸನದಲ್ಲಿ ಉಕ್ತವಾದ ತಿಥಿಯ ಪ್ರಕಾರವಾಗಿ 1206 ತಾರಣ ಸಂವತ್ಸರದ ವೈಶಾಖ ಶುದ್ಧ ಹುಣ್ಣಿಮೆ ಆಗಿ, ಅದಕ್ಕೆ ಕ್ರಿ.ಶ. 1284 ಮೇ 1 ಸೋಮವಾರ ಸರಿಹೊಂದುತ್ತದೆ. ಅಮ್ಮಿನಬಾವಿಯಲ್ಲಿ ಮಡಿವಾಳರು, ವೀರ ಮಡಿವಾಳ ಮಾಚಿದೇವನ ವಿಗ್ರಹವನ್ನು ಪ್ರತಿಷ್ಠೆಯನ್ನು ಮಾಡಿದರೆಂದು ಶಾಸನದ ಸಾರಾಂಶವಾಗಿದೆ.

ಡಾ || ಎಂ. ಎಸ್. ಸುಂಕಾಪುರವರೂ ಸಹ ಗದಗ ತಾಲ್ಲೂಕಿನ ಮುಳಗುಂದ ಗ್ರಾಮದಲ್ಲಿಯೂ ಮೇಗಿನಮಠದ ಮುಂಭಾಗದಲ್ಲಿರುವ ಬಾವಿಯ ಪಕ್ಕದಲ್ಲಿ ಒಂದು ಚಿಕ್ಕ ಗುಡಿ ಇದ್ದು, ಮಾಚಯ್ಯನ ವಿಗ್ರಹವಿರುವುದಾಗಿ ತಿಳಿಸುತ್ತಾರೆ. ಆದರೆ ಯಾವುದೇ ಶಾಸನಗಳ ಸಾಲುಗಳಿಲ್ಲದಿರುವುದು ಇಮ್ಮನ ಬಾವಿಯ ಶಾಸನದಂತೆಯೇ ಮಠದ, ಬಾವಿಯ ಬಳಿಯೇ ವಿಗ್ರಹ ದೊರೆತಿರುವುದು ಹೆಚ್ಚಿನ ಸಂಶೋಧನೆಗೆ ಅವಶ್ಯಕವಾದ ವಿಷಯವಾಗಿದೆ.

ಕಾನಕಾನಹಳ್ಳಿಯ ಕ್ರಿ.ಶ. 1700ರ ಶಾಸನವು ತೆಲುಗಿನಲ್ಲಿ ರಚಿತವಾಗಿದ್ದು, ಮಾಚಯ್ಯನ ಸಂತಾನವೆಂದು ಅಭಿಮಾನಪಡುವ ಮಡಿವಾಳರು ಬರೆಯಿಸಿದ 'ತಾಮ್ರಪಟ'ವಾಗಿದೆ. ಇದರಲ್ಲಿ...

"......... ಕಲ್ಯಾಣ ಪಟ್ಟಣಮಂದು ಯೀಶ್ವರುನಿ ಚಮಟುನಿ
ವೀರಭದ್ರುಡು ಜನ್ಮಿಂಚಿನ ನಾಡು!
ಕಲ್ಯಾಣ ಪಟ್ಟಣಮಂದು ಶಿಲಾಶಾಸನಗಂಗಾವೀರಗಂಟ
ಮಡಿವಾಳಯ್ಯ ಜನನಂ!
ಆ ಕಲ್ಯಾಣ ಪಟ್ಟಣಂ ಪರಮಟ ಭಾಗಮಂದು
ಮಡಿವಾಳಯ್ಯ ಮಟಂಗದ್ದು!
ಅಂದು ಶಿಲಾಶಾಸನಂ ವಂದನ್ನವಾ ಗಾರ್ದಭಂ ಕಡುಪುನ
ಬುಟ್ಟನು!
ಯಿಂದ ನಾಲ್ಕು ಸಮುದ್ರಾಲ ಲೋಗಾನು ಸಾಂಬಸದಾ
ಶಿವದುಚುಡು ಚೇಸಿನ ನಿರ್ದಯಂ ಚತುಸ್ಸಮುದ್ರಾಲಯಂದ್ದುಂನು!"[15]

"ಈಶ್ವರನ ಬೆವರಿನಿಂದ ಮಡಿವಾಳಯ್ಯನು ಜನಿಸಿದನು. ಕಲ್ಯಾಣ ಪಟ್ಟಣದ ಪಶ್ಚಿಮ ಭಾಗದಲ್ಲಿರುವ ಮಡಿವಾಳಯ್ಯನ ಮಠದಲ್ಲಿ ಈ ವಿಷಯವನ್ನು ಹೇಳುವ ಶಾಸನವಿಲ್ಲವೆನ್ನುವರು ಕತ್ತೆಯ ಹೊಟ್ಟೆಯಲ್ಲಿ ಹುಟ್ಟುವರು. ನಮ್ಮ ಹಕ್ಕು ಆಯಗಳ ವಿಷಯದಲ್ಲಿ ಮಡಿವಾಳಯ್ಯನು ರೂಪಿಸಿದ ನಿರ್ಣಯಗಳನ್ನು ಸಮಸ್ತರು ನಡೆಸಿಕೊಡಬೇಕು" ಎಂಬುದು ಈ ತೆಲುಗು ಶಾಸನದ ಅರ್ಥವಾಗಿದೆ.

ಇದಲ್ಲದೇ "ಕ್ರಿ.ಶ. 1700ರಲ್ಲಿ ರಾಯಚೂರಿನ ಝುರಿಬೆಟ್ಟಕ್ಕೆ ಹೊಂದಿಕೊಂಡಂತಿರುವ ದಕ್ಷಿಣಾಭಿಮುಖವಾದ ಬೃಹತ್ ಶಿಲೆಯಲ್ಲಿ ಮಡಿವಾಳ ಮಾಚಯ್ಯನವರ ವಿಗ್ರಹವನ್ನು ಮಡಿವಾಳರು ಪ್ರತಿಷ್ಠಾಪಿಸಿದ್ದಾರೆ."[16] ಈ ವಿಗ್ರಹದ ಮುಂಭಾಗದಲ್ಲಿ ಕೆರೆಯಿದ್ದು, ಕೆರೆಯ ನೀರನ್ನೇ ಮಡಿವಾಳರು ತಮ್ಮ ಕಾಯಕಕ್ಕೆ ಬಳಸುತ್ತಿದ್ದಾರೆ.

ಮಡಿವಾಳ ಮಾಚಯ್ಯನವರ ಅಂತ್ಯಕಾಲಕ್ಕೆ ಸಂಬಂಧಪಟ್ಟಂತೆ ಹಂತಿಯ ಹಾಡುಗಳ ತ್ರಿಪದಿಗಳಲ್ಲಿ ಮಾಚಯ್ಯನು ದೇವರ ಹಿಪ್ಪರಗಿಯ ಗವಿಯ ಸಂಗಮನಲ್ಲಿ ಐಕ್ಯನಾದನೆಂದೂ, ತಿಳಿಸಿದರೆ, ಕೆಲವು ವಿದ್ವಾಂಸರು

'ಗೊಡಚಿ' ಅಥವಾ 'ಕಾರಿಮನೆ'ಯ ಬಳಿ ಬಿಜ್ಜಳನ ಸೇನೆಯೊಡನೆ ಹೋರಾಡುತ್ತಲೇ ಮಾಚಯ್ಯನು ಶಿವನಲ್ಲಿ ಐಕ್ಯರಾದರೆಂದು ಅಭಿಪ್ರಾಯಪಡುತ್ತಾರೆ.

"ಶಿವನೆ ಶಿವಘೋಹರನೆ ಭವದೊಳಗೆ ಜೇಡಿಸ್ನು
ತವಕದೊಯ್ಯಂದ ಮಾಚಯ್ಯ ! ಹಿಪ್ಪರಗಿ
ಗವಿಯ ಸಂಗನೊಳು ಒಂದಾದ

ಹೂವಿನಾ ಮಳೆಗರೆದು ಹೂವಿನಾ ರಾಶಾಗಿ
ದೇವ ಹಿಪ್ಪರಗಿ ಹೆಸರಾಗಿ ! ಸಗ್ಗದಲ್ಲಿ
ಹೂವಾದ ಮಾಚ ಶಿವಪದಕೆ " [17]

ಹಲವು ಜಾನಪದ ನಂಬುಗೆ ಹಾಗೂ ಚೆನ್ನಬಸವನ ಪುರಾಣವು ಮಾಚಯ್ಯನವರು ಉಳಿವೆಯಿಂದ ಹಿಪ್ಪರಿಗೆಗೆ ಹೋಗಿ ಐಕ್ಯರಾದರೆಂಬ ಐತಿಹ್ಯವಿದೆ. ದೇವರ ಹಿಪ್ಪರಗಿಯಲ್ಲಿ ಮಾಚಯ್ಯನ ಗದ್ದುಗೆ ಇದ್ದು ಪ್ರತಿವರ್ಷ ಜಾತ್ರೆ ಉತ್ಸವಗಳು ಜರುಗುತ್ತವೆ. ಈ ಎಲ್ಲ ಸಂಗತಿಗಳು ಈ ನಂಬಿಕೆಯನ್ನು ಹೆಚ್ಚು ಪುಷ್ಟೀಕರಿಸುತ್ತವೆ.

ಒಟ್ಟಾರೆ, ಪ್ರಸ್ತುತ ಅಧ್ಯಾಯದಲ್ಲಿ ಶಿವಶರಣರಾದ ಮಾಚಯ್ಯನವರ ಜನನ, ಪೌರಾಣಿಕ ಹಿನ್ನೆಲೆ, ಕಾಲನಿರ್ಣಯ, ಶಾಸನಪಾಠ, ಅಂತ್ಯಕಾಲಗಳ ಸಂಕ್ಷಿಪ್ತ ಚರ್ಚಿತ ವಿಷಯಗಳಿಂದಾಗಿ ವಚನಕಾರ ವಚನಗಳ ಅಧ್ಯಯನಕ್ಕೆ ಪೂರಕವಾದ ವೈಯಕ್ತಿಕ ನೆಲೆಗಟ್ಟಿನ ವಿಷಯಗಳು ಸ್ಪಷ್ಟವಾಗಿ ಗೋಚರಿಸಲ್ಪಡುವುದನ್ನು ಗಮನಿಸಬಹುದು. ವ್ಯಕ್ತಿಯ ವೈಯಕ್ತಿಕ ವಿಚಾರಗಳ ಮುಖೇನ ವಚನಗಳಲ್ಲಿ ಪ್ರತಿಪಾದಿಸಲ್ಪಡುವ "ಕಾರ್ಯತತ್ವದ" ಮಹತ್ವವು ಮನದಟ್ಟಾಗುತ್ತದೆ. ಅಲ್ಲದೆಯೇ, ಔದ್ಯೋಗಿಕ ಸಮಾನತೆಯ ತತ್ವನ್ನು ತಮ್ಮ ಬದುಕಿನುದ್ದಕ್ಕೂ ಪ್ರಚುರಪಡಿಸಿದ ಮಡಿವಾಳ ಮಾಚಯ್ಯನ ವ್ಯಕ್ತಿತ್ವ ಅನಾವರಣದ ಪ್ರಯತ್ನವನ್ನಿಲ್ಲಿ ಕೈಗೊಳ್ಳಲಾಗಿದೆ.

**ಅಧ್ಯಾಯ – 2ರ ಅಡಿ ಟಿಪ್ಪಣಿಗಳು :–**

1. ವರದಾ ಶ್ರೀನಿವಾಸ, ಮಡಿವಾಳ ಮಾಚಯ್ಯ, ಪುಟ 1
2. ಎಂ. ಎಸ್. ಬಸವರಾಜಯ್ಯ, ಮೂರು ತಾರಾವಳಿಗಳು, ಪುಟ x
3. ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದ ಗೀತಗಳು, ಪುಟ 245
4. ಮಾ. ನಂ. ನಂಜಪ್ಪ, ಬಸವೇಶ್ವರರ ಸಮಕಾಲೀನರು, ಪುಟ 376
5. ಜಿ. ವಿ. ಶಾಸ್ತ್ರಿ, ಮಡಿವಾಳ ಮಾಚಯ್ಯ, ಪುಟ 12
6. ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದ ಗೀತಗಳು, ಪುಟ 246.
7. ವರದಾ ಶ್ರೀನಿವಾಸ, ಮಡಿವಾಳ ಮಾಚಯ್ಯ, ಪುಟ 4.
8. ಅದೇ..., ಪುಟ 4.
9. ಅದೇ., ಪುಟ 5.
10. ಮಾ. ನಂ. ನಂಜಪ್ಪ, ಬಸವೇಶ್ವರರ ಸಮಕಾಲೀನರು, ಪುಟ 379.
11. ಜಿ. ವಿ. ಶಾಸ್ತ್ರಿ, ಮಡಿವಾಳ ಮಾಚಯ್ಯ, ಪುಟ 15.
12. ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದಗೀತಗಳು, ಪುಟ 250.
13. ಜಿ. ವಿ. ಶಾಸ್ತ್ರಿ, ಮಡಿವಾಳ ಮಾಚಯ್ಯ, ಪುಟ. 46.
14. ಮಾ. ನಂ. ನಂಜಪ್ಪ, ಬಸವೇಶ್ವರರ ಸಮಕಾಲೀನರು. ಪುಟ 291.
15. ಆರ್. ರಾಚಪ್ಪ, ವಚನಾನುಭವ, ಪುಟ 44.
16. ಜಿ. ವಿ. ಶಾಸ್ತ್ರಿ, ಮಡಿವಾಳ ಮಾಚಯ್ಯ, ಪುಟ 48.
17. ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದಗೀತಗಳು, ಪುಟ 253.

# ಅಧ್ಯಾಯ – 3

# "ಮಾಚಿದೇವರ ವಚನಗಳ ಸಾಂಸ್ಕೃತಿಕ ಅನನ್ಯತೆ"

ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವೂ, ಸಾಹಿತ್ಯದ ದೃಷ್ಟಿಯಿಂದ ಮಹತ್ವದ ಮಾರ್ಪಾಟುಗಳಿಗೆ ಎಡೆಮಾಡಿಕೊಟ್ಟ ಕಾಲಘಟ್ಟ 12ನೇ ಶತಮಾನದ ವಚನ ಕಾಲಘಟ್ಟವಾಗಿದೆ. ತಮ್ಮ ಕಾಲಘಟ್ಟದಲ್ಲಿದ್ದ ರೂಢಿಮೂಲ ಸಾಮಾಜಿಕ ವ್ಯವಸ್ಥೆಯನ್ನು ದಿಕ್ಕರಿಸಿ ನವಸಮಾಜ ಮತ್ತು ಸಮಸಮಾಜದ ರಚನೆಯ ಕನಸನ್ನು ಕಂಡ ವಚನಕಾರರು ತಮ್ಮ ಅನಿಸಿಕೆ – ಆಶಯಗಳನ್ನು– ಆದರ್ಶಗಳನ್ನು ಜನಭಾಷೆಯಲ್ಲಿಯೇ ಹೇಳುವ ಪರಿ ನಿಜಕ್ಕೂ ವಿಶಿಷ್ಟವಾದುದೇ ಸರಿ! ಭಾಷೆ – ಶೈಲಿಗಳಲ್ಲಿ ಬದಲಾವಣೆ ತಂದು ಸಮಾಜದ ಉತ್ತರೋತ್ತರ ಅಭಿವೃದ್ಧಿಗೆ, ಸಾಮಾಜಿಕ ಬದಲಾವಣೆಗೆ, ಸಾಂಸ್ಕೃತಿಕ ಪರಿಸರ ನಿರ್ಮಾಣಕ್ಕೆ ಬಸವಾದಿ ಶಿವಶರಣರ ಕೊಡುಗೆ ಅಪಾರವಾದುದಾಗಿದೆ. ರಾಜಾಶ್ರಯವನ್ನು ಧಿಕ್ಕರಿಸಿದ ವಚನಕಾರರು ಜನರ ಆಡುನುಡಿಗೆ ಹತ್ತಿರವಾದ ಜನ ಭಾಷೆಯನ್ನು ಆಯ್ದುಕೊಂಡು ಆಧ್ಯಾತ್ಮಿಕ ವಿಚಾರಗಳ ಚರ್ಚೆ, ಅನುಭಾವಿಗಳ ಅನುಭವಗಳ ಅಭಿವ್ಯಕ್ತಿಗೆ, ತಾತ್ತ್ವಿಕ ವಿಚಾರಗಳ ವಿಮರ್ಶೆಗೆ, ಧಾರ್ಮಿಕ ವಿಚಾರ ಮಂಡನೆಗೆ, ಸಂಸ್ಕೃತವೇ ಅತ್ಯಂತ ಸಮಂಜಸವಾದುದೆನ್ನುವ ನಿಲುವಿಗೆ ವಿರುದ್ಧವಾಗಿ ಕನ್ನಡ ಭಾಷೆಯ ಬಳಕೆಯನ್ನು ಬಳಸಿದವರು. ಈ ಮೂಲಕ ಕನ್ನಡ ಸಾಹಿತ್ಯ ಪರಂಪರೆಯನ್ನು ಕನ್ನಡದ ಸಾಂಸ್ಕೃತಿಕ ಅನನ್ಯತೆಯನ್ನು ವಿಸ್ತರಿಸಿದವರು ಹನ್ನೆರಡನೆಯ ಶತಮಾನದ ಶಿವ ಶರಣ ವಚನಕಾರರು. ಈ ಹಿನ್ನೆಲೆಯಲ್ಲಿ ಭಾಷೆಯ ಬಳಕೆಯ ದೃಷ್ಟಿಯಿಂದ ವಚನಕಾರರ ಪವಾಡವನ್ನು ಶಿ.ಶಿ. ಬಸವನಾಳರು ಹೇಳಿರುವ ಮಾತು ಹೆಚ್ಚು ಸಮಂಜಸವೇ ಆಗಿವೆ. "ಬಹುಕಾಲದಿಂದಲೂ ಪಂಡಿತರ ತುತ್ತಾಗಿದ್ದ, ವಿಶಿಷ್ಟ ವರ್ಗದವರ ಸೊತ್ತಾಗಿದ್ದ ರಾಜ್ಯಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ, ತಮ್ಮ ಅನುಭವದ ಕಮ್ಮಟದಲ್ಲಿಯೇ ಅಚ್ಚೊತ್ತಿದ ವಚನನಾಣ್ಯಗಳನ್ನು ಜನಸಾಮಾನ್ಯರಲ್ಲೆಲ್ಲ ಸಲ್ಲುವಂತೆ ಹರಡಿಸಿದವರು ವಚನಕಾರರು. ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ, ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರು."[1] ಇಂತಹ ಜನವಾಣಿಯನ್ನು ದೇವವಾಣಿಯ ಮಟ್ಟಕ್ಕೇರಿಸಿದ ಶರಣರಲ್ಲಿ ಮಡಿವಾಳ ಮಾಚಿದೇವನೂ ಅಗ್ರಗಣ್ಯರ ಸಾಲಿನಲ್ಲಿ ನಿಲ್ಲುತ್ತಾನೆ. ವಚನಕಾರರು ವಚನಗಳ ಕೊನೆಯಲ್ಲಿ ತಮ್ಮ ಇಷ್ಟದೈವವನ್ನು ಪ್ರಸ್ತಾಪಿಸಿರುವುದು ವಚನಗಳಲ್ಲಿ ಕಾಣುವ ವಿಶೇಷವಾದ ಅಂಶವಾಗಿದೆ. ಕೆಲವು ವಚನಕಾರರು ತಮ್ಮ ಹೆಸರನ್ನೇ ತಾವು ರಚಿಸಿದ ವಚನಗಳ ಕಡೆಯಲ್ಲಿ ಅಂಕಿತವನ್ನಾಗಿ ಬಳಸಿರುವುದನ್ನು ಅಂಬಿಗರ ಚೌಡಯ್ಯ, ಉರಿಲಿಂಗಪೆದ್ದಿ ಮುಂತಾದವರಲ್ಲಿ ಕಾಣಬಹುದು. ಮಡಿವಾಳ ಮಾಚಿದೇವರು 'ಕಲಿದೇವರ ದೇವ' ಎನ್ನುವ ಅಂಕಿತದಿಂದ ವಚನ ರಚನೆಯಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡರು.

ಮಡಿವಾಳ ಮಾಚಿದೇವರ ವಚನಗಳನ್ನು ಅಧ್ಯಯನ ಮಾಡಿದಾಗ ಅವರು ಪೂರ್ಣ ಪ್ರಮಾಣದ ಸಾಹಿತ್ಯಾಧ್ಯಯನ ಮಾಡಿದವರಲ್ಲವೆನ್ನುವುದು ವೇದ್ಯವಾಗುತ್ತದೆ. ಬಹುಶಃ ಈ ಮಾತನ್ನು ಎಲ್ಲಾ ವಚನಕಾರರಿಗೂ ಅನ್ವಯಿಸಬಹುದೇನೋ. ಶಾಸ್ತ್ರಾಭ್ಯಾಸ, ವೇದ, ಆಗಮ, ಉಪನಿಷತ್ತುಗಳ ಪುರಾಣಗಳ ಅಭ್ಯಾಸವನ್ನು ಮಾಚಯ್ಯನವರು ಕೈಗೊಂಡಿದ್ದರೆನ್ನುವುದು ಅವರ ವಚನಗಳನ್ನು ಅಭ್ಯಸಿಸಿದವರಿಗೆ ತಿಳಿಯುತ್ತದೆ. ಮಾಚಯ್ಯನವರ ವಚನಗಳಲ್ಲಿ ವಿಸ್ತಾರವಾದ ಸಾಮಾಜಿಕ ದೃಷ್ಟಿಕೋನದ ಹೊಳಹು ಕಂಡುಬರುತ್ತದೆ. ಮಾಚಯ್ಯನವರ ವಚನಗಳು ಕನಿಷ್ಟ 4 ಸಾಲುಗಳಿಂದ, ಅತಿಹೆಚ್ಚೆಂದರೆ 38 ಸಾಲುಗಳವರೆವಿಗೂ ವಿಸ್ತರಿಸಿದ್ದರೂ ಕೆಲವು ವಚನಗಳಲ್ಲಿ ಗಾದೆಯಂತೆಯೇ. ನಾಣ್ಣುಡಿಗಳಂತೆ ಕಿರಿದರಲ್ಲಿ ಹಿರಿದರ್ಥವನ್ನು ಉಳ್ಳಂತವುಗಳಾಗಿವೆ. ಶಿವಶರಣರ ವಚನವಾಙ್ಮಯದ ವ್ಯಾಪ್ತಿಯನ್ನು ವಿವರಿಸುವ ಸಂದರ್ಭದಲ್ಲಿ ಶಿವಯೋಗಿ ಸಿದ್ಧರಾಮನು ತನ್ನ ವಚನವೊಂದರಲ್ಲಿ ಹೀಗೆ ವಿವರಿಸುತ್ತಾನೆ.

> "ಅಲ್ಲಯ್ಯನ ವಚನ ಎರಡೆಂಭತ್ತು ಕೋಟಿ
>
> ಅಪ್ಪಯ್ಯಗಳ ವಚನ ನಾಲ್ಕು ಲಕ್ಷ ಮೂವತ್ತಾರುಸಾಸಿರ
>
> ಮಡಿವಾಳಯ್ಯನ ವಚನಗಳು ಮೂರು ಕೋಟಿ ಮುನ್ನೂರು"[2]

ವಾಸ್ತವದಲ್ಲಿ ಮಡಿವಾಳಯ್ಯನವರ ವಚನಗಳ ಸಂಖ್ಯೆಯನ್ನು ಒಪ್ಪುವುದು ಕಷ್ಟಸಾಧ್ಯವಾಗುತ್ತದೆ. ವಚನಗಳ ಸಂಖ್ಯೆಯು ಮುಖ್ಯವಲ್ಲದಿದ್ದರೂ ಅವುಗಳ ಸತ್ವಭರಿತತೆ, ಸಾಹಿತ್ಯಶಕ್ತಿಯು ಓದುಗರಿಗೆ ನಿಲುಕದಿರಲು ಸಾಧ್ಯವಿಲ್ಲ. ಕೆಳವರ್ಗದ ಕೆಲವು ವಚನಕಾರರಲ್ಲಿ ಬಂಡಾಯದ ಧೋರಣೆಯನ್ನು ಕಾಣುವಂತೆ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯನಂಥವರಲ್ಲಿ ಸಮಾಜದ ಬಗೆಗಿನ ಹೆಚ್ಚಿನ ಕಾಳಜಿ, ಕಳಕಳಿ ವ್ಯಕ್ತವಾಗುತ್ತದೆ. ಬಸವಾದಿ ಶರಣರು ಆರಂಭಿಸಿದ ವಚನ ಕ್ರಾಂತಿಯಲ್ಲಿ ಕಂಡು ಬರುವ ಎಲ್ಲಾ ಗುಣಗಳೂ ಸಹ ಮಡಿವಾಳ ಮಾಚಯ್ಯನವರ ವಚನಗಳಲ್ಲಿವೆ. ಆತ್ಮವಿಶ್ವಾಸ, ಎದೆಗಾರಿಕೆ, ಜ್ಞಾನ, ಭಕ್ತಿ, ಢಾಂಬಿಕತೆಯ ನಿರಾಕರಣೆ, ಕೀಳುದೈವದ ಖಂಡನೆ, ಶಿವಭಕ್ತಿಯ ಶ್ರೇಷ್ಠತೆ ಮಹತ್ವದ ಸ್ಥಾನಪಡೆದಿವೆ. ಮಡಿವಾಳ ಮಾಚಿದೇವರ ವಚನಗಳ ಸಂಗ್ರಹಣ ಕಾರ್ಯದಲ್ಲಿ "ಫ. ಗು. ಹಳಕಟ್ಟಿಯವರು" ಮಡಿವಾಳ ಮಾಚಿದೇವರ ವಚನಗಳು ಸಂಕಲನದಲ್ಲಿ ನೂರು ವಚನಗಳನ್ನು ಸಂಗ್ರಹಿಸಿದರೆ, ಉಮಾಪತಿಯವರು ಪ್ರಕಟಿಸಿರುವ 'ಮಡಿವಾಳಯ್ಯನ ವಚನಗಳ'ಲ್ಲಿ 345 ವಚನಗಳಿವೆ. ಹಾಗೆಯೇ 1987ರಲ್ಲಿ ಚೆನ್ನಕ್ಕ ಎಲಿಗಾರರವರು 487 ವಚನಗಳನ್ನು ಸಂಪಾದಿಸುತ್ತಾರೆ. ಪಂಡಿತ ನಂಜುಂಡಯ್ಯನವರ ಸಂಪಾದಕತ್ವದಲ್ಲಿರುವ ಹಸ್ತಪ್ರತಿಯಲ್ಲಿ 492 ವಚನಗಳಿರುವುದೂ, ಸಂಕೀರ್ಣ ವಚನ ಸಂಪುಟ – 3ರಲ್ಲಿ ಡಾ. ಬಿ. ಆರ್. ಹಿರೇಮಠರವರು 353 ವಚನಗಳನ್ನು ಸಂಪಾದಿಸಿದ್ದಾರೆ"[3]

ಮಡಿವಾಳ ಮಾಚಯ್ಯನ ವಚನಗಳನ್ನು ಮುಂದಿನಂತೆ ವಿಭಾಗೀಕರಿಸಿಕೊಂಡು ಅಭ್ಯಸಿಸುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

1. ಜಾತ್ಯತೀತ ನಿಲುವುಗಳು
2. ಗುರು – ಲಿಂಗ – ಜಂಗಮದ ಪರಿಕಲ್ಪನೆ.
3. ಆತ್ಮವಿಮರ್ಶೆ ನೆಲೆಯ ವಚನಗಳು.
4. ಏಕದೇವೋಪಾಸನೆ ಕುರಿತ ಚಿಂತನೆಗಳು.
5. ಸ್ಥಾವರ – ಜಂಗಮತ್ವದ ವಿಶ್ಲೇಷಣೆ.
6. ಅಂತರಂಗ – ಬಹಿರಂಗ ಶುದ್ಧಿಯ ಚರ್ಚೆ
7. ಸಾಮಾಜಿಕ ವಿಡಂಬನೆ.
8. ಇತರ ವಚನಗಳು.

**1. ಜಾತ್ಯತೀತ ನಿಲುವುಗಳು :**

12ನೇ ಶತಮಾನದ ವೇಳೆಗೆ ವರ್ಣಪದ್ಧತಿಯ ಮರೆಯಾಗಿ ಜಾತಿವ್ಯವಸ್ಥೆಯು ನಮ್ಮ ಸಮಾಜದಲ್ಲಿ ನೆಲೆಯೂರಿತ್ತು. ಕೆಲವೆಡೆ ವರ್ಣವ್ಯವಸ್ಥೆಯನ್ನು ಖಂಡಿಸುವ ಸಂದರ್ಭದಲ್ಲಿ ವಚನಕಾರರು ವರ್ಣಗಳನ್ನು ಉಲ್ಲೇಖಿಸುತ್ತಾರೆ. ವಚನಕಾರರು ಜಾತಿಗಳನ್ನು ಪುರುಷನ ವಿವಿಧ ಅಂಗಗಳಿಗೆ ಹೋಲಿಕೆ ಮಾಡುತ್ತಾರೆ. ಜಾತಿಗಳು ಸಹಜವಾದುದೆಂಬ ಆಗಿನ ಭಾವನೆಯನ್ನು ಇದು ಸೂಚಿಸುತ್ತದೆ. 'ಪುರುಷಸೂಕ್ತ'ದಲ್ಲಿರುವ ವಿವಿಧ ವರ್ಣಗಳವರು ವಿರಾಟ್ ಪುರುಷನ ವಿವಿಧ ಅಂಗಗಳಿಂದ ಬಂದವರೆನ್ನುವ ಕಲ್ಪನೆಯನ್ನಿದು ಹೋಲುತ್ತದೆ. ನಿದರ್ಶನಕ್ಕೆ ಸೊಡ್ಡಳ ಬಾಚರಸನ ವಚನವನ್ನು ಈ ಸಂದರ್ಭದಲ್ಲಿ ಗಮನಿಸಬಹುದು–

"ಶಿಖಿ ಬ್ರಾಹ್ಮಣ, ನಯನ ಕ್ಷತ್ರಿಯ, ನಾಸಿಕ ಬಣಜಿಗ
ಅಧರ ಒಕ್ಕಲಿಗ, ಕರ್ಣಗೊಲ್ಲ, ಕೊರಳು ಕುಂಬಾರ, ಬಾಹು
ಪಾಂಚಾಳ, ಅಂಗೈ ಉಪ್ಪಾರ, ನಖ ನಾಯಿಂದ, ಒಡಲು
ದೊಂಬ, ಬೆನ್ನು ಅಗಸ, ಚರ್ಮಚಾಡ, ಪೃಷ್ಠಸ್ಥಾನ ಕಬ್ಬಿಲಿಗ,
ಒಳದೊಡೆ ಹೊಲೆಯ, ಮೊಣಕಾಲು ಈಡಿಗ, ಕಣಕಾಲು
ಸಮ್ಮಗಾರ, ಮೇಗಾಲು ಮಚ್ಚಿಗ, ಜಲಪಾದವೆಂಬ ಅಂಗಾಲು
ಶುದ್ಧಮಾದಿಗ ಕಾಣಿರೋ"[4]

12ನೇ ಶತಮಾನದ ಹೊತ್ತಿಗೆ ಜಾತಿಗಳು ಸಮಾಜದಲ್ಲಿ ಬಲವಾಗಿ ಬೇರೂರಿದ್ದವು ಜಾತಿಗಳ ಸಾಮಾಜಿಕ ಅನುಕ್ರಮವಾಗಿ ಬೇರೂರಿದ್ದವು. ಜಾತಿಗಳ ಸಾಮಾಜಿಕ ಅನುಕ್ರಮ(Social Hierachy)ವೂ ಬಹುಮಟ್ಟಿಗೆ ನಿರ್ಧಾರಿತವಾಗಿತ್ತು. ವಚನಕಾರರು ತಮ್ಮ ವಚನಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖವನ್ನು ಮಾಡತೊಡಗಿದ್ದರು.

ಇವಲ್ಲದೇ ಉಪಜಾತಿಗಳೂ ಸಮಾಜದಲ್ಲಿ ಇದ್ದಂತೆ ಕಾಣುತ್ತದೆ. ಬಸವಣ್ಣನವರಾದಿಯಾಗಿ ಎಲ್ಲ ವಚನಕಾರರು. ಮಡಿವಾಳ ಮಾಚಯ್ಯನವರನ್ನೊಳಗೊಂಡಂತೆ ಜಾತ್ಯತೀತ ಸಮಾಜದ ನಿರ್ಮಾಣದ ಕನಸು ಕಂಡರು.

"ಕಾಸಿ ಕಮ್ಮಾರನಾದ

ಬೀಸಿ ಮಡಿವಾಳನಾದ

ಹಾಸನಿಕ್ಕಿ ಸಾಲಿಗನಾದ

ವೇದವನೋದಿ ಹಾರುವನಾದ

ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?

ಇದು ಕಾರಣ ಕೂಡಲಸಂಗಮದೇವ

ಲಿಂಗಸ್ಥಲವನರಿದವನೇ ಕುಲಜನು![5]

ಎಂದು ಸಮಾನತೆಯನ್ನು ಸಾರುತ್ತಲೇ ಜಾತಿಯನ್ನು ಪುನರರ್ಥೈಸುವ, ಜಾತಿಯನ್ನು ಬದಲಾಯಿಸುವ ಮಾನವ ನಿರ್ಮಿತ ವರ್ಗೀಕರಣವನ್ನು ಪಲ್ಲಟಿಸುವ ಪ್ರಯತ್ನವನ್ನಿಲ್ಲಿ ಕಾಣಬಹುದು.

ಜಾತಿಗಳು ಮನುಷ್ಯನ ವೃತ್ತಿಗಳ ಆಧಾರದ ಮೇಲೆ ನಿರ್ಮಿತವಾದವುಗಳಾಗಿವೆ ವಿನಃ ಹುಟ್ಟಿನಿಂದ ಎಲ್ಲರೂ ಸಮಾನರು ಎನ್ನುವ ಭಾವನೆ ಬಸವಣ್ಣ ಮತ್ತು ಇತರ ವಚನಕಾರರದ್ದಾಗಿದೆ. ಹುಟ್ಟಿನ ಮೇಲೆ ನಿರ್ಧಾರಿತವಾಗುತ್ತಿದ್ದ ಜಾತಿಪದ್ಧತಿಯು ಆಳವಾಗಿ ಬೇರುಬಿಟ್ಟಿದ್ದರ ಬಗ್ಗೆ ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳುವಂತೆ "ನಮ್ಮ ಸಮಾಜವು ಹಿಮಾಚಲದಂತೆ ಸ್ವಲ್ಪ ಕರಗಬಹುದಾದರೂ ಚಲಿಸುವುದಿಲ್ಲ"[6] ಎನ್ನುವ ಮಾತುಗಳು ಅಂದಿನ ಜಾತಿ ಪದ್ಧತಿಗೆ ಸಂಪೂರ್ಣವಾಗಿ ಅನ್ವಯವಾಗುತ್ತದೆ. ಜಾತಿ ಪದ್ಧತಿಯ ಅನಿಷ್ಟವು ಶರಣರಿಗೆ ಅರಿವಾಗಿದ್ದುದರಿಂದ ಅದನ್ನು ವಿರೋಧಿಸಿದ ಶರಣರು, ರಾಜನು ದೇವರ ಅಂಶ ಸಂಭೂತನೆಂಬ ಭಾವನೆಯಿದ್ದ ಕಾಲದಲ್ಲಿ ಆ ನಂಬಿಕೆಯನ್ನು ಅಲ್ಲಗಳೆದರು. ರಾಜನ ಬಗ್ಗೆ ಯಾವುದೇ ವಿಶೇಷ ಗೌರವವನ್ನು ತಳೆಯದಿದ್ದ ವಚನಕಾರರು ರಾಜನ ವಿಚಾರವಾಗಿ ಖಂಡಿಸುವುದನ್ನು ಕಾಣಬಹುದು. "ವ್ಯಾಧನೊಂದು ಮೊಲವ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ, ನೆಲನಾಳ್ವನ ಹೆಣನೆಂದಡೆ ಒಂದಡಿಕೆಗೆ ಕೊಂಬವರಿಲ್ಲ ನೋಡಯ್ಯಾ, ಮೊಲನಿಂದ ಕರಕಷ್ಟ ನರನ ಬಾಳುವೆ" ಎನ್ನುವ ನುಡಿಗಳ ಮೂಲಕ ರಾಜನನ್ನು ಇತರ ಎಲ್ಲರೊಡನೆ ಸಮೀಕರಿಸಿರುವುದನ್ನು ಕಾಣಬಹುದು.

ಮಡಿವಾಳ ಮಾಚಯ್ಯನಲ್ಲಿಯೂ ಜಾತೀಯತೆಯನ್ನು ವಿಡಂಬಿಸುವ, ಸಮಾನತೆಯನ್ನು ಸಾರುವ, ಯಾವ ಜಾತಿಯಾದರೂ ಸರಿಯೇ ಗುರುವಿನ ಕಾರುಣ್ಯವನ್ನು ಪಡೆಯುವುದು, ಅಂಗದ ಮೇಲೆ ಲಿಂಗವನ್ನು ಧರಿಸಿ ಚಿತ್ತಶುದ್ಧಿಯಿಂದ ಗುರುವಿನ ಸೇವೆ ಮಾಡುವುದೊಳಿತು ಎನ್ನುತ್ತಾರೆ. ಗುರುವಿನ ವೇಷಧಾರಿಗಳನ್ನ ತಮ್ಮ ವಚನದಲ್ಲಿ ವಿಡಂಬಿಸುತ್ತಾರೆ. ದಾಸೋಹ ಮಾಡುವುದು ಪ್ರತಿಯೊಬ್ಬ ಶರಣರ ಕರ್ತವ್ಯವೆಂದೂ.

ಗುರುವಿನ ಆಜ್ಞೆಯನ್ನು ಮೀರದೇ ಗುರುದ್ರೋಹಿಗಳನ್ನು ಜಂಗಮರೆಂದು ತಿಳಿದು ನಮಸ್ಕರಿಸಿ ಆರಾಧಿಸಿ ಉಪಚರಿಸಿದರೆ ನರಕ ತಪ್ಪದು ಎನ್ನುವ ಮನೋಭಾವನೆಯನ್ನು ವ್ಯಕ್ತಪಡಿಸುತ್ತಾನೆ. ಈ ಮೂಲಕ ಸೊಡ್ಡಳ ಬಾಚರಸನ ವಚನದಲ್ಲಿ ಉಲ್ಲೇಖಿಸಿದ ಹದಿನೆಂಟು ಜಾತಿಗಳ ಉಲ್ಲೇಖವನ್ನು ಮಾಚಯ್ಯನೂ ನೀಡುತ್ತಾನೆ. ಬಹಳ ಸಾಧುತ್ವದಿಂದಲೇ 'ಆ ಜಾತಿ ಈ ಜಾತಿಯವರೆನ ಬೇಡ, ಹದಿನೆಂಟು ಜಾತಿಯೊಳಗಾವ ಜಾತಿಯಾದರೂ ಆಗಲಿ ಗುರುವಿನ ಕರುಣೆಗೊಳಗಾಗುವ ಕ್ರಿಯೆಮುಖ್ಯ'ವೆಂದು ಮುಂದಿನಂತೆ ಸಾರುತ್ತಾನೆ.

"ಆ ಜಾತಿ ಈ ಜಾತಿಯವರೆನ ಬೇಡ
ಹದಿನೆಂಟು ಜಾತಿಯೊಳಗಾದ ಜಾತಿಯಾದಡೂ ಆಗಲಿ,
ಗುರು ಕಾರುಣ್ಯವ ಪಡೆದು, ಅಂಗದ ಮೇಲೆ ಲಿಂಗವ ಧರಿಸಿ
ಪುನರ್ಜಾತರಾದ ಬಳಿಕ, ಭಕ್ತರಾಗಲಿ ಜಂಗಮರಾಗಲಿ
ಗುರುವಿನ ವೇಷವಿದ್ದವರ ಗುರುವೆಂದು ನಂಬಿ
ದಾಸೋಹವ ಮಾಡೂದೆ ಸದಾಚಾರ
ಗುರುವನತಿಗಳೆದು, ಗುರುವಾಜ್ಞೆಯ ಮೀರಿ
ಗುರುಕೊಟ್ಟ ಪಂಚಮುದ್ರೆಗಳ ಮೇಲೆ
ಅನ್ಯಸಮಯ ಮುದ್ರೆಯ ಲಾಂಛನಾಂಕಿತವಾಗಿ
ಗುರುದ್ರೋಹಿಗಳಾಗಿ ಬಂದವರ
ಜಂಗಮರೆಂದು ಕಂಡು, ನಮಸ್ಕರಿಸಿ, ಆರಾಧಿಸಿ
ಪ್ರಸಾದ ಕೊಂಡವಂಗೆ ನಾಯಕನರಕ ತಪ್ಪದೆಂದ
ಕಲಿದೇವಯ್ಯ".[7]

ಜಾತೀಯತೆಯು ಮುಖ್ಯವಲ್ಲ, ಮನುಷ್ಯ ಹೇಗೆ ನಿಜಜೀವನದಲ್ಲಿ ಬಾಳ್ವೆಮಾಡುತ್ತಾನೆ ಎನ್ನುವುದೇ ಬಹುಮುಖ್ಯವಾಗಿರುತ್ತದೆ ಎನ್ನುವ ಮಾಚಯ್ಯನವರ ಚಿಂತನೆ ನಿಜಕ್ಕೂ ಅದ್ಭುತವಾದುದಾಗಿದೆ. ಇಡೀ ಸಮಾಜವೆಲ್ಲವೂ ಜಾತೀಯತೆಯ ಕೂಪದಲ್ಲಿ ಮುಳುಗಿದ್ದಾಗ ಜಾತೀಯತೆಯ ಕಟು ಟೀಕೆ– ವಿಡಂಬನೆಯನ್ನು ಜಾತ್ಯತೀತ ನಿಲುವಿನ ಪ್ರತಿಪಾದನೆಯನ್ನು ಮಾಚಯ್ಯನವರ ಮತ್ತೊಂದು ವಚನವು ಅತ್ಯಂತ ಹೆಚ್ಚು ಅರ್ಥಪೂರ್ಣವಾಗಿ ಮನದಟ್ಟು ಮಾಡಿಕೊಡುತ್ತದೆ. ಅಸ್ಪೃಶ್ಯವರ್ಗದ ವ್ಯಕ್ತಿ ನಿಸ್ಸಂಕೋಚವಾಗಿ, ಊರ ಒಳಗೆ ಪ್ರವೇಶಿಸಲು ಅವಕಾಶವಿಲ್ಲದಂತಹ, ಊರು–ಕೇರಿಗಳಲ್ಲಿ ಓಡಾಡಲು ನಿಗದಿತ ಸಮಯವನ್ನು ನಿಗದಿಪಡಿಸಿದ್ದರು. ನಿಗದಿಪಡಿಸಿದ ಸಮಯದಂತೆ, ನಿಯಮದ ಪ್ರಕಾರ ಮಧ್ಯಾಹ್ನದ ಹನ್ನೆರಡು ಗಂಟೆಗೆ ಮಾತ್ರ ಊರ ಒಳಗೆ ಪ್ರವೇಶಿಸಬೇಕಾಗಿತ್ತು. ಕೈಯಲ್ಲೊಂದು ಬಡಿಗೆ, ಬೆನ್ನಿಗೆ ಮುಳ್ಳುಜಾಲಿಗೆ ಕೊರಳಲ್ಲಿ

ತೆಂಗಿನ ಪರಟೆ ಕಟ್ಟಿಕೊಂಡು 'ಜಾಡಮಾಲಿ ಬರುತ್ತಿದ್ದಾನೆ, ಹೊಲೆಯ ಬರುತ್ತಿದ್ದಾನೆ. ದಯಮಾಡಿ ದಾರಿ ಬಿಡಿ ಎಂದು ಕೂಗಿಕೊಂಡು ಓಡಾಡಬೇಕಿತ್ತು. ಅಪ್ಪಿತಪ್ಪಿ ಮೇಲ್ವರ್ಗದ ವ್ಯಕ್ತಿಯಾದರೂ ಎದುರಿಗೆ ಬಂದರೆ ಅಸ್ಪೃಶ್ಯನಾದ ವ್ಯಕ್ತಿಯು ದೂರದಲ್ಲಿ ನೆಲದ ಮೇಲೆ ಅಡ್ಡ ಮಲಗಬೇಕಾಗಿತ್ತು. ಉಗುಳು ಬಂದರೆ ಕೊರಳಲ್ಲಿ ಕಟ್ಟಿದ ಪರಟೆಯಲ್ಲೇ ಉಗುಳಬೇಕು. ಒಂದು ವೇಳೆ ಅಸ್ಪೃಶ್ಯನ ಉಗುಳನ್ನು ತುಳಿದರೆ ಮೇಲುಜಾತಿಯ ಜನರಿಗೆ ಮೈಲಿಗೆಯಾಗುತ್ತದೆ ಎನ್ನುವ ನಂಬಿಕೆ, ಬೆನ್ನಿಗೆ ಬಾರಿಗೆ ಕಟ್ಟಿಕೊಂಡಿದ್ದರಿಂದ ಅಸ್ಪೃಶ್ಯನ ಹೆಜ್ಜೆಯ ಮೇಲೆ ಮೇಲ್ವರ್ಗದವರು ನಡೆದರೆ ಮೈಲಿಗೆಯಾಗುತ್ತದೆಂಬ ಕಾರಣಕ್ಕಾಗಿ ತಾನು ನಡೆದ ದಾರಿಯ ಹೆಜ್ಜೆಗಳನ್ನು ಅಳಿಸಲು ಬೆನ್ನಿಗೆ ಬಾರಿಗೆ ಕಟ್ಟಿಕೊಂಡು ಓಡಾಡಬೇಕಾದ ಅಮಾನವೀಯ ಪದ್ಧತಿ ಅಂದಿನ ದಿನಮಾನಗಳಲ್ಲಿತ್ತು. ಇದನ್ನು ಕಟುವಾಗಿ ವಿಡಂಬಿಸುವಂತೆ ವಚನ ಚಳುವಳಿಯಲ್ಲಿ  ಮಡಿವಾಳ ಮಾಚಯ್ಯನ ವಚನವನ್ನು ಕಾಣಬಹುದಾಗಿದೆ 'ನಡೆದಂತೆ  ನಡೆಯದೆ', ಪ್ರತಿ ನಿತ್ಯವೂ ಲಿಂಗವನ್ನು ಆರಾಧಿಸದೆ, ಹಣದಾಸೆಗೆ ಪ್ರಾಣವನ್ನು ತೆಗೆಯುವ ಕೊಲೆಗಡುಕರು, ಸತ್ಯಕ್ಕೆ ಬದುಕದೆ, ಸದ್ಗುಣಗಳಿಲ್ಲದೆಯೇ, ಧರ್ಮವಿಲ್ಲದೆ ನಿತ್ಯವೂ ಅನಾಚಾರಗಳಲ್ಲಿ, ದುರಾಚಾರಗಳಲ್ಲಿ ತೊಡಗಿಸಿಕೊಂಡು ಗುರು – ಲಿಂಗ – ಜಂಗಮ ಪಾದೋದಕ ಪ್ರಸಾದವನ್ನು ತಿರಸ್ಕರಿಸುವ, ಮುಗ್ಧ ಪಶುಗಳ ಹತ ಮಾಡುವವನೇ ನಿಜವಾದ ಹೊಲೆಯನೆಂದು ವ್ಯಾಖ್ಯಾನಿಸುತ್ತಾನೆ. ತಮ್ಮಲ್ಲಿರುವ ಇಂತಹ ದುರ್ಗುಣಗಳನ್ನು ಹಿಂಗಿಸಿಕೊಳ್ಳದೆ ತಂತಮ್ಮ ಕುಲದ ಹೆಮ್ಮೆಯ ಮೇಲೆಂದು ಉಳಿದವರೆಲ್ಲರೂ ಕೀಳೆಂದೂ ಜರಿಯುವವರೇ ನಿಜವಾದ ಹೊಲೆಯರೆಂದು ಮಾಚಯ್ಯನವರು ಪ್ರತಿಪಾದಿಸಿದ್ದಾರೆ–

"ನಿತ್ಯ ಲಿಂಗಾರ್ಚನೆಯ ಮಾಡದೆ ಒಡಲಹೊರೆವನೆ ಹೊಲೆಯ
ಹತ್ತು ನುಡಿದಡೇನು ಒಂದೂ ನಿಜವಿಲ್ಲದವನೆ ಹೊಲೆಯ
ಅರ್ಥದಾಸೆಗೆ ಪ್ರಾಣವ ಹತವ ಮಾಡುವನೆ ಹೊಲೆಯ
ಸತ್ಯ ಸದ್ಗುಣ ನಿತ್ಯಾಚಾರ ಧರ್ಮವಿಲ್ಲವೆಂಬವನೆ ಹೊಲೆಯ
ಭಕ್ತಿ ಮುಕ್ತಿಯ ಪಥವ ಹುಸಿಯೆಂಬವನೆ ಹೊಲೆಯ
ಇಂತೀ ಏಳು ಹೊಲೆಯ ಹಿಂಗಿಸದೆ
ತನ್ನ ಕುಲದ ಹೆಮ್ಮೆಯ ಮೆರೆವ ಕುನ್ನಿಗಳ ನುಡಿಯ ಕೇಳಲಾಗದೆಂದ,
ಕಲಿದೇವಯ್ಯ"[8]

ಹೀಗೆ ಅಸ್ಪೃಶ್ಯತೆಯನ್ನು ಖಂಡಿಸುವ ಮನೋಧರ್ಮವನ್ನು ಆ ಮೂಲಕ ಜಾತ್ಯತೀತ ಸಮಾಜದ ನಿರ್ಮಾಣವನ್ನು ಮಾಚಯ್ಯ ಮತ್ತು ಇತರ ಶಿವಶರಣ ವಚನಕಾರರಲ್ಲಿ ಗಮನಿಸಬಹುದಾಗಿದೆ.

## 2. ಗುರು – ಲಿಂಗ – ಜಂಗಮದ ಪರಿಕಲ್ಪನೆ :

ಮಾನವನ ಹೃದಯಕಮಲದಲ್ಲಿ ಅಥವಾ ಬ್ರಹ್ಮರಂಧ್ರದಲ್ಲಿ ಅಡಕವಾಗಿರುವ ಚಿತ್ಕಳೆಯನ್ನು ಅಧ್ಯಾತ್ಮ ಶಕ್ತಿಯಿಂದ ಗ್ರಹಿಸಿ ಇಷ್ಟಲಿಂಗದಲ್ಲಿ ಅದನ್ನು ಪ್ರತಿಷ್ಠಾಪಿಸಿ ಕರ್ಣಂಗಳಲ್ಲಿ ಪ್ರಣವ ಪಂಚಾಕ್ಷರಿಯನ್ನು ಉಪದೇಶಿಸಿ ಸಾಧನೆಯಿಂದ ಚಿತ್ಕಳೆಯನ್ನು ಪ್ರಕಟಿಸಿಕೊಳ್ಳಲು 'ಗುರು' ದೀಕ್ಷೆಯ ಮೂಲಕ ಅನುಗ್ರಹಿಸುತ್ತಾನೆ. ಪರಶಿವತತ್ವದ ನಿಜಸ್ವರೂಪದ ಬಗೆಗೆಯೂ ಆತ ಉಪದೇಶ ಮಾಡುತ್ತಾನೆ. 'ಗುರು'ವು ಈ ರೀತಿಯಾಗಿ ನಿತ್ಯ ನಿರಂಜನ ವಸ್ತುವಿನ ಒಂದು ಮುಖವಾಗಿ ಕಾಣಿಸಿಕೊಳ್ಳುತ್ತಾನೆ. ಇಷ್ಟ ಲಿಂಗವು ಪರವಸ್ತುವಿನ ಇನ್ನೊಂದು ಮುಖ. ಇದರ ಮೂಲಕವೇ ದೃಷ್ಟಿಯೋಗದಿಂದ ಸಾಧನೆಯ ಕೊನೆಯ ಹಂತದಲ್ಲಿ ಮಾನವನಲ್ಲಿ ಅಂತರ್ಗತವಾದ ದೈವೀಶಕ್ತಿ ಸಂಪೂರ್ಣವಾಗಿ ಪ್ರಕಟವಾಗುತ್ತದೆ. ಇದು ಸಾಧನೆಯ ಮಾಧ್ಯಮವಲ್ಲದೆ ಪ್ರಥಮದಲ್ಲಿ ಪರವಸ್ತು ತಾನಾಗಿಯೇ ಪರಿಣಮಿಸುತ್ತದೆ. ಹೀಗೆ ಈ ಲಿಂಗವೇ ವೀರಶೈವರಿಗೆ ಅಥವಾ ಲಿಂಗಾಯತರಿಗೆ ಪರವಸ್ತುವಾಗುತ್ತದೆ. ಅಧ್ಯಾತ್ಮ ಸಾಧನೆಯ ತುತ್ತ ತುದಿಯನೇರಿ ವಿಷಯ ಪ್ರಪಂಚದ ಹಂಗನ್ನು ಹರಿದು ಮಾನವ ಕುಲದ ಒಳಿತಿಗಾಗಿ ಅಧ್ಯಾತ್ಮ ಸಾಧನೆಯಲ್ಲಿ ತೊಡಗಿರುವವರನ್ನು ಪರೀಕ್ಷಿಸಿ ಅವರ ತಪ್ಪುಗಳನ್ನು ತಿದ್ದಿ ಮಾರ್ಗದರ್ಶನ ಮಾಡಲು ಪರವಸ್ತು ಜಂಗಮ ರೂಪವಾಗಿ ಚರಿಸುತ್ತದೆ. ಪರಶಿವನೇ ತಾನಾದ ಈ ಜಂಗಮ ಭಕ್ತರನ್ನು ತಿದ್ದಿ ಅವರಿಂದ ದಾಸೋಹ ಮಾಡಿಸಿಕೊಂಡು ಪ್ರಸಾದವನ್ನು ಅನುಗ್ರಹಿಸುವುದರ ಮೂಲಕ ಅವರನ್ನು ಉದ್ಧರಿಸುತ್ತಾರೆ. ದಾಸೋಹಗೈಯ್ಯಲು ಬೇಕಾದ ಧನಧಾನ್ಯ ಮುಂತಾದವುಗಳನ್ನು ಭಕ್ತರಾದವರು ಸತ್ಯಶುದ್ಧ ಹಾಗೂ ಪ್ರಾಮಾಣಿಕ ದುಡಿಮೆಯಿಂದ ಸಂಪಾದಿಸುವುದು ಕಡ್ಡಾಯವಾಗಿ ಪರಿಣಮಿಸುತ್ತದೆ. ಇಂಥ ದುಡಿಮೆಯೇ ಕಾಯಕವೆನಿಸಿಕೊಳ್ಳುತ್ತದೆ. ತಾನು ಮಾಡುವ ಕಾಯಕ ಗುರು, ಲಿಂಗ, ಜಂಗಮ, ದಾಸೋಹಕ್ಕೆಂಬ ಭಾವನೆ ಭಕ್ತನಲ್ಲಿ ಬೇರೂರಬೇಕು. ಈ ಗುರು, ಲಿಂಗ, ಜಂಗಮರ ಪರಿಕಲ್ಪನೆ ಬಸವಣ್ಣಾದಿಯಾಗಿ ಮಾಚಯ್ಯನವರ ಹಲವಾರು ವಚನಗಳಲ್ಲಿ ಗುರುತಿಸಬಹುದಾಗಿದೆ. ಅಂಗದ ಮೇಲೆ ಧರಿಸಿದ ಲಿಂಗಕ್ಕಿಂತಲೂ ಅಂತರಂಗದಲ್ಲಿ ಧರಿಸಿದ ಲಿಂಗವೇ ಶ್ರೇಷ್ಠವಾಗುತ್ತದೆ. ಮನಸ್ಸಿನ ತುಂಬೆಲ್ಲಾ ಲಿಂಗಸ್ವರೂಪವನ್ನೇ ತುಂಬಿಕೊಳ್ಳಬೇಕು ಎನ್ನುತ್ತಾರೆ ಮಡಿವಾಳ ಮಾಚಯ್ಯ.

"ಅಂಗಲಿಂಗಸಂಬಂಧವಾಗಬೇಕೆಂಬ
ಭಂಗಿತರ ಮಾತು ಕೇಳಲಾಗದು
ಅಂಗಲಿಂಗ ಸಂಬಂಧ ಕಾರಣವೇನು
ಮನವು ಮಹದಲ್ಲಿ ನಿಂದ ಬಳಿಕ
ಲಿಂಗ ಸಂಬಂಧವೇನು ಹೇಳಾ,
ಕಲಿದೇವರದೇವ"[9]

ಕೇವಲ ಹೊರ ಜಗತ್ತಿಗೆ ತೋರಿಸಲು ಮಾತ್ರವೇ ಲಿಂಗಧರಿಸುವ ಡಾಂಭಿಕ ಭಕ್ತರಿಗೆ, ಅಂತರಂಗಶುದ್ಧಿ ಇಲ್ಲದ ಬಹಿರಂಗದಲ್ಲಿ ಮಾತ್ರ ಶುದ್ಧತೆಯನ್ನಿಟ್ಟುಕೊಂಡು ಜೀವಿಸುವ ಕಪಟಿಗಳಿಗೆ ಚಾಟಿಬೀಸುವ ಪರಿಯನ್ನಿಲ್ಲಿ ಕಾಣಬಹುದು. ಹಾಗೆಯೇ ಇಷ್ಟಲಿಂಗದ ಮಹತ್ವವನ್ನು ಮಾಚಯ್ಯನವರು ತಮ್ಮ ವಚನದಲ್ಲಿ ವಿಶ್ಲೇಷಿಸುತ್ತಾರೆ. ಹೇಳುವ ವಿಚಾರಗಳನ್ನು ಯಾವುದೇ ಭಯವಿಲ್ಲದೆ ನಿರ್ಭೀಡೆಯಿಂದ ನೇರವಾಗಿ ಹೇಳುವ ವಚನಗಳು ಅಂದಿನ ಸಮಾಜವನ್ನು ತಿದ್ದುವಲ್ಲಿ ದಿವ್ಯಔಷಧಿಗಳಂತೆ ಕಾರ್ಯನಿರ್ವಹಿಸಿವೆ.

ಒಂದೇ ವಚನದಲ್ಲಿ ಇಷ್ಟಲಿಂಗವನ್ನು, ಡಾಂಭಿಕ – ಬೂಟಾಟಿಕೆಯ ಭಕ್ತರನ್ನು, ಅನ್ಯದೈವ್ಯಗಳನ್ನು, ಲಿಂಗ ದ್ರೋಹಿಗಳನ್ನು ಯಾವುದೇ ಮುಲಾಜಿಲ್ಲದೆ ವಚನಗಳಲ್ಲಿ ಪ್ರಶ್ನಿಸುವ ಎದೆಗಾರಿಕೆಯು ಮಾಚಯ್ಯನವರ ವಚನಗಳಲ್ಲಿ ಅಡಕವಾಗಿವೆ. ಕಾಯಕವಿಲ್ಲದೆ ದಾಸೋಹವಿಲ್ಲ. ದಾಸೋಹವಿಲ್ಲದೆ ಜಂಗಮ ತೃಪ್ತಿಯಿಲ್ಲ, ಜಂಗ ತೃಪ್ತಿಯಿಲ್ಲದೆ ಲಿಂಗತೃಪ್ತಿಯಿಲ್ಲ, ಗುರು ತೃಪ್ತಿಯೂ ಇಲ್ಲ. ಏಕೆಂದರೆ ಅಧ್ಯಾತ್ಮ ಸಾಧನೆಯಲ್ಲಿ ಗುರುವೇ ಮೊದಲಿಗ. 'ಶಿವಪಥವನರಿವಡೆ ಗುರುಪಥವೇ ಮೊದಲು, ಗುರು, ಲಿಂಗ, ಜಂಗಮ ತತ್ವಗಳು ದೈವತ್ವದ ಮೂರು ಮುಖಗಳಾಗಿ ಪರಿಣಮಿಸುತ್ತವೆ, ಅವೇ ದೈವವಾಗಿ ಕಾಣಿಸಿಕೊಳ್ಳುತ್ತವೆ.ಸತ್ಯಶುದ್ಧ ಕಾಯಕದಿಂದ ಧನಾರ್ಜನೆ ಮಾಡಿ ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನರ್ಪಿಸಿ ಅವು ಅನುಗ್ರಹಿಸಿದ ಪ್ರಸಾದದಿಂದ ಈ ದೇಹವನ್ನು ಪ್ರಸಾದ ಕಾಯವನ್ನಾಗಿಸಿಕೊಳ್ಳಬೇಕೆಂದು ಮಾಚಯ್ಯನವರು ತಿಳಿಸುತ್ತಾರೆ.

"ಅರಿವಿಲ್ಲದೆ ಗುರುವ ಕಾಣಬಾರದು
ಅರಿದಲ್ಲದೆ ಲಿಂಗವ ಕಾಣಬಾರದು
ಅರಿದಲ್ಲದೆ ಜಂಗಮವ ಕಾಣಬಾರದು
ಇಂತೀ ತ್ರಿವಿಧವು ಬಸವಣ್ಣನ ಕೃಪೆಯಿಂದಲೆನಗೆ
ಸಾಧ್ಯವಾಯಿತ್ತಾಗಿ ಭಿನ್ನವಿಲ್ಲ ಕಾಣಾ ಕಲಿದೇವರ ದೇವಾ"[10]

ಗುರು, ಲಿಂಗ, ಜಂಗಮರನ್ನು ಹೇಗೆ ಕಾಣಬೇಕೆಂಬುದು ಮಾಚಯ್ಯನವರ ಈ ವಚನದಲ್ಲಿದೆ. 'ಅರಿವೆ ಗುರು' ಎನ್ನುವ ಮಾತಿನಂತೆ ಗುರು, ಲಿಂಗ, ಜಂಗಮನನ್ನು ಜ್ಞಾನದ ಮೂಲಕವೇ ಕಾಣಬೇಕು. ಅರಿಯದೇ ಯಾವುದನ್ನು ತಿಳಿಯಲಾಗದು, ತಿಳಿಯಬಾರದು. ಇವೆಲ್ಲವೂ ಬಸವಣ್ಣನ ಕೃಪೆಯಿಂದ ತನಗೆ ಸಾಧ್ಯವಾಯಿತೆನ್ನುವಲ್ಲಿ ಮಾಚಯ್ಯನವರು ಬಸವಣ್ಣನವರಲ್ಲಿಟ್ಟ ಅಭಿಮಾನ ವ್ಯಕ್ತವಾಗುತ್ತದೆ.

ಜೀವನದಲ್ಲಿ ಗುರುವಾದವನಿಗೆ ಮಹತ್ವದ ಸ್ಥಾನ ಆದ್ದರಿಂದಲೇ 'ಗುರುಭ್ಯೋನಮಃ', 'ಗುರು ದೇವ್ಯೋನಮಃ' ಎನ್ನುತ್ತಾ ಗುರುವಾದವನು ದೈವ ಸ್ವರೂಪಿ, ತಪ್ಪುದಾರಿಯಲ್ಲಿ ಚಲಿಸುವವರನ್ನು ಸರಿದಾರಿಗೆ ತರುವಾತನೇ ಗುರು. ಅಜ್ಞಾನವೆಂಬ ತಿಮಿರವನ್ನು ಜ್ಞಾನವೆಂಬ ಶಲಾಖೆಯಿಂದ ಸರಿಸುವವನೇ ಗುರು. ಅಂತಹ ಗುರುಗಳಿಗೆ ಸಂಬಂಧಿಸಿದ ಕಾರ್ಯ ಎಸಗದವನು ನರಕಿಯಾಗುತ್ತಾನೆ. ಪಾಪಿಯಾಗುತ್ತಾನೆ ಎಂಬುದು ಮಾಚಯ್ಯನವರ ಹೇಳಿಕೆ. ಆತ್ಮಶೋಧನೆ ಮಾಡಿಕೊಳ್ಳುವ ಸಂದರ್ಭದಲ್ಲಿ ಮಾಚಯ್ಯನವರು ಕೊಡುವ ದೃಷ್ಟಾಂತಗಳಿಂದ ಮನಃಪರಿವರ್ತನೆಗೆ ಅವಕಾಶವಿದೆ.

"ಗುರುವಿನ ಉಪದೇಶ ಕೇಳದವ ನರಕಿ

ಗುರು ಚರಣವ ಪೂಜೆಯಮಾಡದವ ನರಕಿ

ಗುರುವ ಕಂಡು ಕರವ ಮುಗಿಯದವನೆ ನರಕಿ'[11]

ಅಂತಹ 'ನರಕಿ' ಯಾದವನಿಗೂ "ಗುರುವಾಗಿ ಉಪದೇಶಿಸಿದರೆ, ಲಿಂಗವಾಗಿ ಮನವನ್ನು ಇಂಬುಗೊಂಡರೆ, ಜಂಗಮವಾಗಿ ಅರ್ಥಪ್ರಾಣ, ಅಭಿಮಾನದ ದರ್ಪವನ್ನು ಕೆಡಿಸಿದರೆ" ಆತ ಮತ್ತೆ ಪರಿಶುದ್ಧನಾಗಿ ಸದಾಚಾರಿಯಾಗಿ ಬಾಳಲು ಸಾಧ್ಯ ಎನ್ನುವುದೇ ವಚನಕಾರ ಮಾಚಯ್ಯನವರ ಉಪದೇಶವಾಗಿದೆ.

ಅನುಭವ ಮಂಟಪದಲ್ಲಿ ಮಡಿವಾಳ ಮಾಚಯ್ಯನವರು ಕಾಯಕತತ್ವದ ಮುಖೇನ ತನ್ನ ವೃತ್ತಿಯನ್ನು ಪ್ರಭುದೇವರಲ್ಲಿ ನಿವೇದಿಸುವಾಗ, ವ್ಯಕ್ತಿಯು ಸಮಾಜದಲ್ಲಿ ಸರಿಯಾದ ರೀತಿಯಲ್ಲಿ ನಡೆದುಕೊಳ್ಳಬೇಕಾದರೆ ಯಾವುದಾದರೊಂದು ಕಾಯಕವನ್ನು ಕೈಗೊಳ್ಳಲೇ ಬೇಕು. ಪರಾವಲಂಬಿತರಾಗದೇ, ಸೋಮಾರಿತನಕ್ಕೆ ಆಸ್ಪದವಿಯದೆಯೇ ಜೀವಿಸಬೇಕು. 'ಕಾಯಕ'ವು 'ಇಹ ಜೀವನಕ್ಕೆ ಎಷ್ಟು ಮುಖ್ಯವಾಗುತ್ತದೆಯೋ ಅಷ್ಟೇ ಮುಖ್ಯ 'ಪರ'ದ ಜೀವನಕ್ಕೂ ಪ್ರಮುಖವಾಗುತ್ತದೆ. ಇದರಿಂದ ಗುರು, ಲಿಂಗ, ಜಂಗಮ ದಾಸೋಹವು ಸುಗಮವಾದರೆ ಕಾಯಕದ ತತ್ವವನ್ನು ಸಾಧಿಸಿದಂತಾಗುತ್ತದೆಂಬ ಧ್ಯೇಯವೇ ನನ್ನ ಕಾಯಕದ ಗುರಿ ಮತ್ತು ತಿರುಳಾಗಿದೆ ಎಂದು ಉತ್ತರಿಸುತ್ತಾರೆ. ಮರುಕ್ಷಣವೇ, ಪ್ರಭುದೇವರು ಹಾಗಾದರೆ ನಿಮ್ಮ ಸದಾಚಾರ? ಏನೆಂದು ಪ್ರಶ್ನಿಸಿದಾಗ –

"ಲಿಂಗದ ಸ್ಥಿತಿಗತಿಗಳನ್ನರಿವುದೇ ಲಿಂಗಾಚಾರ

ಶಿವನಿಂದೆಯ ಕೇಳದಿರುವುದೇ ಗಣಾಚಾರ

ಶಿವಭಕ್ತರೆಂಬ ಲಿಂಗಾಂಗಿಗಳಲ್ಲಿ ಜಾತಿಸೂತಕವ ನೋಡದೆ

ಅವರೊಕ್ಕುವ ಸಲಿಸುವುದೇ ಶಿವಾಚಾರ

ತನುಮನವನ್ನು ಬಳಲಿಸಿ ಗುರುಲಿಂಗ ಜಂಗಮಕ್ಕೆ

ಮಾಡುವುದೇ ಸದಾಚಾರ"[12]

ಶಿವಭಕ್ತನೇ ಹಿರಿಯ, ನಾನು ಕಿರಿಯನೆಂಬ ಭಯ ಭಕ್ತಿಯಲ್ಲಿ ಆಚರಿಸುವುದೇ ಭೃತ್ಯಾಚಾರವೆಂದು ಮಾಚಿದೇವರು ಭಿನ್ನವಿಸಿಕೊಳ್ಳುತ್ತಾರೆ.

ಮಾಚಯ್ಯನವರ ಸಮಕಾಲೀನ ವಚನಕಾರರಾದ ನುಲಿಯ ಚಂದಯ್ಯನೆಂಬ ಶರಣನು ಅರಣ್ಯದಿಂದ ಮೆದೆ ಹುಲ್ಲು, ಮರದ ತೊಗಟೆ ಮೊದಲಾದವುಗಳನ್ನು ತಂದು ಅದರಿಂದ ಹಗ್ಗ, ಕಣ್ಣಿಗಳನ್ನು ಮಾಡಿ ತಲೆಯ ಮೇಲೆ ಹೊತ್ತು ತಂದು ನಗರದಲ್ಲಿ ಮಾರಿ ಬಂದ ಕಾಯಕ ದ್ರವ್ಯದಿಂದ ಗುರು, ಲಿಂಗ, ಜಂಗಮ ಸೇವಾಕಾರ್ಯವನ್ನು ಮಾಡಿಕೊಂಡು ಮಹಾಶರಣನೆನಿಸಿದ್ದನು. ಒಮ್ಮೆನುಲಿಯ ಚಂದಯ್ಯ ಕಾಯಕ ನಿರತನಾಗಿದ್ದಾಗ ಅವನ ಇಷ್ಟಲಿಂಗ ಜಾರಿ ನೀರಿನೊಳಗೆ ಇಳಿಯುತ್ತದೆ. ತಾನಾಗಿಯೇ ನೀರಿನಲ್ಲಿ ಜಾರಿಬಿದ್ದ ಲಿಂಗವನ್ನೇಕೆ ಮತ್ತೆ ಧರಿಸುವುದು? ಭಾವಲಿಂಗದಲ್ಲಿಯೇ ಪೂಜಿಸುತ್ತೇನೆ ಎಂದು ನಿರ್ಧರಿಸಿ ಕಾಯಕದಲ್ಲಿ ನಿರತನಾದಾಗ

ತದೇ ಮಾರ್ಗದಲ್ಲಿ ನಡೆಯುತ್ತಿದ್ದ ಮಾಚಿದೇವರು ಇಷ್ಟಲಿಂಗವಿಲ್ಲದ್ದನ್ನು ಕಂಡು ಅಯ್ಯಾ! ಶರಣರು ಲಿಂಗಾಂಗ ಸಾಮರಸ್ಯ ಸಿದ್ಧಿಸಿದ ಮಾತ್ರಕ್ಕೆ ತತ್‌ಸಂಬಂಧವಾದ ಆಚರಣೆಯನ್ನು ಬಿಡಬಾರದು. ಸಕ್ಕರೆ ಸಿಹಿಯಾದ ಮಾತ್ರಕ್ಕೆ ಜೇನುತುಪ್ಪ ಬೇಡವೆನ್ನಬಹುದೇ? ಎರಡೂ ಬೆರೆತರೆ ಮತ್ತಷ್ಟು ಸಿಹಿಯಲ್ಲವೇ?

"ಸವಿ ಸಾಕು, ಹಣ್ಣು ಬೇಡವೆನ್ನಬಹುದೇ?

ಹಣ್ಣು ಇದ್ದರಲ್ಲವೇ ಸವಿ?

ಇಷ್ಟಲಿಂಗ ಬೇಡ, ಭಾವಲಿಂಗ ಬೇಕೆಂಬುದು ಭ್ರಮೆ

ಅರಿವನರಿದಿಹೆನೆಂದು ಕ್ರಿಯೆ ಬಿಡಬಹುದೆ?

ಕಚ್ಚುವ ತಿಗಣೆಗಾಗಿ ಮನೆಯ ಸುಟ್ಟವರುಂಟೆ?

ಅವಗುಣಕ್ಕೆ ಮುನಿಯ ಬೇಕಲ್ಲದೆ ಲಾಂಛನಕ್ಕೆ ಮುನಿಯ

ಬಹುದೇ? ಮುಗ್ಗಿದ ತುರುಗವ ಕಾಲ ಕತ್ತರಿಸಿದವರುಂಟೆ?

ಕಲಿದೇವರ ದೇವನಲ್ಲಿ ತಪ್ಪು ಹಿಡಿಯಲಿಲ್ಲ ಕೇಳಾ ಚಂದಯ್ಯ"

ಎಂದು ನುಡಿಯುತ್ತಾರೆ. ಮುಂದುವರೆದು –

"ಗುರು ಪೂಜೆಯ ಅರಿದೆನೆಂದು ಲಿಂಗಪೂಜೆಯ ಬಿಡಲಾಗದು

ಲಿಂಗಪೂಜೆಯನರಿದನೆಂದು ಜಂಗಮಪೂಜೆಯ ಮರೆಯಲಾಗದು

ಜಂಗಮಪೂಜೆಯನರಿದೆನೆಂದು ಶರಣಸಂಗವ ಮರೆಯಲಾಗದು

ಇದು ಕಾರಣ, ಶರಣಸಂಗವ ಸಮ್ಯಗ್ ಜ್ಞಾನದಲ್ಲದೆ

ಕಲಿದೇವಯ್ಯನ ಕೂಡುವ ಕೂಟ ಕಾಣಬಾರದು

ಹೋಹಾ ಬಾರಾ ಚಂದಯ್ಯ"[13]

ಗುರು, ಲಿಂಗ, ಜಂಗಮರ, ಶರಣರ ಸಂಗದ ಮಹತ್ವವನ್ನು ತಿಳಿಸಿ ಮತ್ತೆ ಇಷ್ಟಲಿಂಗವನ್ನು ನುಲಿಯ ಚಂದಯ್ಯನವರ ಸಂದೇಹ ನಿವಾರಿಸಿ ಇಷ್ಟಲಿಂಗಧಾರಣೆಯಾಗುವಂತೆ ಮಾಡುತ್ತಾರೆ.

ಗುರು, ಲಿಂಗ, ಜಂಗಮ, ಪಾದೋದಕ ಪ್ರಸಾದವ ಮಹತ್ವ ಮತ್ತು ಮಹಿಮೆಯನ್ನು ಅರ್ಥಪೂರ್ಣವಾಗಿ ವಿವರಿಸುವ ಅನೇಕ ವಚನಗಳು ಮಡಿವಾಳ ಮಾಚಯ್ಯನವರಲ್ಲಿವೆ. ಗುರು, ಲಿಂಗ, ಜಂಗಮ ಪಾದೋದಕ ಪ್ರಸಾದವನ್ನು ಕೇವಲವಾಗಿ ಕಂಡು, ಗುರುವಿನಾಜ್ಞೆಯನ್ನು ಮೀರುವ ದುರಾತ್ಮರನ್ನು ಟೀಕಿಸುತ್ತಲೇ, ಅಂತಹ ದುರಾತ್ಮರನ್ನು, ದುರುಳರನ್ನು ಮುಖವನ್ನು ನೋಡಲು ಸಾಧ್ಯವಿಲ್ಲ, ಅವರ ಸಹವಾಸದಿಂದಲೇ ದೂರವಿರುವುದು ಒಳಿತೆನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

"ಶರಣ ಸತಿ – ಲಿಂಗಪತಿ" ಎನ್ನುವ ವಚನಸಾಹಿತ್ಯದ ವಿಶಿಷ್ಟಾಂಶವನ್ನು ಮಾಚಯ್ಯನವರ ವಚನದಲ್ಲಿ ಗುರುತಿಸಬಹುದಾಗಿದೆ. ಅಂಗದ ಮೇಲೆ ಲಿಂಗ ಧರಿಸಿದ ಸದ್ಭಕ್ತನಾದವನಿಗೆ ಲಿಂಗವೇ ಪತಿಯಾಗಿ, ಶರಣನೇ ಸತಿಯಾಗಿರುವಾಗ ಬೇರೆ ಸತಿಯುಂಟೆ? ಎಂದು ಪ್ರಶ್ನಿಸುತ್ತಾರೆ. ಅಲ್ಲದೇ ನಿಜವಾದ ಭಕ್ತಿ ವಿವಾಹದ ವರ್ಣನೆಯನ್ನು ತಮ್ಮ ವಚನದಲ್ಲಿ ಕಟ್ಟಿಕೊಡುತ್ತಾರೆ. ಜಗದ್ವ್ಯವಹಾರದ ಪಂಚಾಂಗ ಸೂತಕ ಮದುವೆಗಾಗಿ ಹರೆಯನ್ನು ಬಡಿಸಿ, ಹಸೆಮಣೆ ಏರಿ, ಬಾಸಿಂಗ ಕಟ್ಟಿಕೊಂಡು, ಧಾರೆಯನ್ನರೆಯುವವರು ಗುರುಭಕ್ತರಲ್ಲ ಅವರಿಗೆ ಮುಕ್ತಿಯಿಲ್ಲ. ಪ್ರಸಾದವಿಲ್ಲವಾಗಿ ನರಕ ತಪ್ಪದು ಎಂದು ಕಟುವಾಗಿ ವಿವರಿಸಿದ್ದಾರೆ.

'ಗುರುಕರ ಜಾತರಾಗಿ ಅಂಗದ ಮೇಲೆ ಲಿಂಗಸಾಹಿತ್ಯವಾದ – ಸದ್ಭಕ್ತಂಗೆ.
ಆ ಲಿಂಗವೆ ಪತಿ, ತಾನೆ ಸತಿಯಾಗಿರಲು ತನಗೆ ಬೇರೆ ಸತಿಯುಂಟೆ?
ಗುರುಕರದಲ್ಲಿ ಉದಯವಾಗಿ, ಅಂಗದ ಮೇಲೆ ಲಿಂಗ ಧರಿಸಿದ ಲಿಂಗಾಂಗನಿಗೆ,
ಆ ಲಿಂಗವೆ ಪತಿ, ತಾನೆ ಸತಿಯಾಗಿರಲು ಆಕೆಗೆ ಬೇರೆ ಪತಿಯುಂಟೆ?
ಇದು ಕಾರಣ, ಲಿಂಗವೆ ಪತಿ, ತಾವಿಬ್ಬರೂ ಭಕ್ತಿ ಸತಿಗಳಾಗಿ
ಲಿಂಗ ಸೇವೆಯ ಮಾಡಿ, ಜಂಗಮದಾಸೋಹಿಗಳಾಗಿ,
ಲಿಂಗ ಜಂಗಮ ಪ್ರಸಾದ ಸುಖಿಗಳಾಗಿರಿಯೆಂದು
ಶ್ರೀಗುರು ವಿಭೂತಿಯ ಪಟ್ಟವಂ ಕಟ್ಟಿ, ಉಭಯಮಂ ಕೈಗೂಡಿಸಿ,
ಏಕಪ್ರಸಾದವ ಮಾಡಿ ಭಕ್ತಿ ವಿವಾಹ ಮಾಡಿದ ನೋಡಾ
ಇಂತಪ್ಪ ವಿವಾಹದ ಕ್ರಮವನ್ನರಿಯದೆ,
ಮತ್ತೆ ಬೇರೆ ಜಗದ್ವ್ಯವಹಾರವನ್ನುಳ್ಳ ಪಂಚಾಂಗ ಸೂತಕ
ಪಾತಕದ ಮೊತ್ತದ ಮದುವೆಗೆ ಹರೆಯ ಹೋಯಿಸಿ
ಹಸೆಯಂ ಸೂಸಿ, ತೊಂಡಿಲು ಬಾಸಿಂಗವೆಂದು ಕಟ್ಟಿ
ಧಾರೆಯನೆರೆದು ಭೂಮವೆಂದುಣಿಸಿ
ಹೊಲೆಸೂತಕದ ಮದುವೆಯ ಮಾಡುವ ಪಾತಕರ
ಒಡಗೂಡಿಕೊಂಡು ನಡೆವವರು, ಗುರುಚರ ಭಕ್ತರಲ್ಲ
ಅವರಿಗೆ ಪ್ರಸಾದವಿಲ್ಲ, ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ
ಮುಕ್ತಿಯಿಲ್ಲದವಂಗೆ ನರಕತಪ್ಪದು ಕಾಣಾ, ಕಲಿದೇವಯ್ಯಾ"[14]

ಹೀಗೆ ಸುಮಾರು 20ಕ್ಕೂ ಹೆಚ್ಚಿನ ವಚನಗಳಲ್ಲಿ ಮಾಚಯ್ಯನವರು ಗುರು, ಲಿಂಗ, ಜಂಗಮದ ವ್ಯಾಖ್ಯಾನಕ್ಕೆ ತೊಡಗುತ್ತಾರೆ. ಶರಣ ಪರಂಪರೆಯಲ್ಲಿನ ಗುರು, ಲಿಂಗ, ಜಂಗಮದ ಮಹತ್ವವನ್ನು ಸವಿವರವಾಗಿ ವಿಶ್ಲೇಷಿಸಿ, ಬೋಧನಾತ್ಮಕ ನಿಲುವಿನ ಪ್ರತಿಪಾದನೆಯಲ್ಲೂ ತೊಡಗಿಸಿಕೊಳ್ಳುತ್ತಾರೆ.

**3. ಆತ್ಮವಿಮರ್ಶೆಯ ನೆಲೆಯ ವಚನಗಳು :**

ವಚನಕಾರರು ತಮ್ಮ ಮಾನಸಿಕ ಘರ್ಷಣೆಯನ್ನು, ಸಾಧಕ ಜೀವನದ ಎಡರುತೊಡರುಗಳನ್ನು, ಲೌಕಿಕ ಜಗತ್ತಿನಲ್ಲಿ ತಾವುಗಳು ಎದುರುಗೊಂಡ ತೊಳಲಾಟಗಳನ್ನು ತಮ್ಮ ವಚನಗಳಲ್ಲಿ ದಾಖಲಿಸುವ ಪ್ರಯತ್ನಮಾಡಿದ್ದಾರೆ. ಲೌಕಿಕವಾಗಿ ಅನುಭವಿಸಿದ ಅನುಭವಗಳು ಸುಂದರವಾದ ರೀತಿಯಲ್ಲಿ ಎಷ್ಟೋ ಬಾರಿ ವಚನಗಳಲ್ಲಿ ಮೂಡಿಬಂದು ಸಾರ್ವತ್ರಿಕ ಸ್ಪಂದನೆಯನ್ನು ಪಡೆದುಕೊಂಡವು. ವಚನಕಾರರು ಅಳವಡಿಸಿಕೊಂಡ ಆದರ್ಶಗಳಿಗೆ ವಿರುದ್ಧವಾಗಿ ಲೌಕಿಕ ಜಗತ್ತಿನ ಸೆಳೆತಗಳನ್ನು ಎದುರಿಸುವ ಸಂದರ್ಭದಲ್ಲಿ ಹಲವಾರು ವಚನಗಳು ರಚನೆಗೊಂಡವು. ಶರಣನು ತನ್ನ ಆದರ್ಶದ ಅನುಸಂಧಾನದ ಕಾಲದಲ್ಲಿ ಸಂಪೂರ್ಣ ಮನಸ್ಸನ್ನು ಏಕಾಗ್ರತೆಯಲ್ಲಿ ಹಿಡಿದಿಡಲು ಸಾಧ್ಯವಾಗದೆ, ಪ್ರಾಪಂಚಿಕ ಆಕರ್ಷಣೆಗಳಿಗೆ ಒಳಗಾಗಿ ತನ್ನ ಮನೋದೌರ್ಬಲ್ಯವನ್ನು ತನ್ನ ಇಷ್ಟದೈವದ ಮುಂದೆ ತೋಡಿಕೊಂಡು ಪಶ್ಚಾತ್ತಾಪಪಡುವ ರೀತಿಯಲ್ಲಿ ಅನೇಕ ವಚನಗಳಿವೆ. ಕೆಲವೊಂದು ವಚನಗಳಲ್ಲಿ ಆಂತರಿಕ ತೊಳಲಾಟ– ಸಾಂಸಾರಿಕ ಬಂಧನಗಳಿಂದ ಬಿಡುಗಡೆಗೊಳಿಸುವಂತೆಯೂ, ಶರಣರು ಬೇಡಿಕೊಳ್ಳುವ ಪರಿಯನ್ನು ಕಾಣಬಹುದಾಗಿದೆ. ವೈರಾಗ್ಯಪರವಾದ ಮನಸ್ಸು ಸಾಂಸಾರಿಕವಾಗಿ ಆಕರ್ಷಣೆಗೊಳಗಾದಾಗ ಉಂಟಾಗುವ ಮಾನಸಿಕ ಘರ್ಷಣೆಯ ಚಿತ್ರಣವನ್ನು ಅಕ್ಕಮಹಾದೇವಿಯ ವಚನಭಾಗವೊಂದು ವ್ಯಕ್ತಪಡಿಸುತ್ತದೆ.

"ಉಳ್ಳುದೊಂದು ತನು, ಉಳ್ಳುದೊಂದು ಮನ
ನಾನಿನ್ನಾವ ಮನದಲ್ಲಿ ಧ್ಯಾನವ ಮಾಡುವೆನಯ್ಯಾ?
ಸಂಸಾರನಾವ ಮನದಲ್ಲಿ ತಲ್ಲೀಯವಾಹೆನಯ್ಯಾ?
ಅಕಟಕಟಾ, ಕೆಟ್ಟೆ, ಕೆಟ್ಟೆ! ಸಂಸಾರಕ್ಕಲ್ಲಾ, ಪರಮಾರ್ಥಕ್ಕಲ್ಲ?
ಎರಡಕ್ಕೆ ಬಿಟ್ಟ ಕರುವಿನಂತೆ
ಬಿಲ್ವ – ಬೆಳವಲಕಾಯನೊಂದಾಗಿ ಹಿಡಿಯಬಹುದೆ
ಚೆನ್ನಮಲ್ಲಿಕಾರ್ಜುನಾ"[15]

ಎರಡು ಪರಸ್ಪರ ವಿರುದ್ಧ ಆಕರ್ಷಣೆಗೊಳಗಾಗಿ ಎರಡರಲ್ಲಿಯೂ ಮನವನ್ನು ನೆಲೆಗೊಳಿಸಿಕೊಳ್ಳಲಾರದೆ, ಐಹಿಕ ಜೀವನವನ್ನೂ ಒಪ್ಪಿಕೊಳ್ಳಲಾರದ, ಧೈರ್ಯದಿಂದ ಎಲ್ಲವನ್ನೂ ಗೆಲ್ಲಲಾರದ ಇಬ್ಬಂದಿ ಸ್ಥಿತಿಯಲ್ಲಿರುವ ಮನಸ್ಸು, ಜೀವನ ವ್ಯರ್ಥವಾಯಿತೆನ್ನುವ ಭಾವನೆಯು 'ಸಂಸಾರಕ್ಕಲ್ಲಾ ಪರಮಾರ್ಥಕ್ಕಲ್ಲ' ಎಂಬ ಮಾತುಗಳಲ್ಲಿ

ವ್ಯಕ್ತವಾಗಿದೆ. 'ಎರಡಕ್ಕೆ ಬಿಟ್ಟ ಕರುವಿನಂತೆ ಎನ್ನುವಲ್ಲಿ ಮನಸ್ಸು ಇಹ – ಪರಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳಲಾರದ ಅನಿಶ್ಚಿತ ಸ್ಥಿತಿಯಲ್ಲಿವೆ. ಇಂತಹುದೇ ದ್ವಂದ್ವಗಳನ್ನು, ಮನಸ್ಸನ್ನು ನಿಗ್ರಹಿಸಿಕೊಳ್ಳಬೇಕೆಂಬ ನಿಲುವುಳ್ಳ ವಚನಗಳನ್ನು ಮಡಿವಾಳ ಮಾಚಯ್ಯನವರಲ್ಲಿಯೂ ಕಾಣಬಹುದಾಗಿದೆ.

"ಅಕ್ಕಾ ತಂಗಿಯರೈವರು ಒಬ್ಬನ ಅರಸಿಯರು

ಕಿರಿಯಾಕೆಯ ಕೂಡುವಡೆ ಹಿರಿಯಾಕೆ ಕುಂಟಣಿ

ಹಿರಿಯಾಕೆಯ ಕೂಡುವಡೆ ಕಿರಿಯಾಕೆ ಕುಂಟಣಿ

...... ಈ ಐವರನೂ ಅಪ್ಪಿಕೊಂಡು ಒಂದೆ ಬಾರಿ ಬೆರೆಸಲು

ನೀರುನೀರ ಬೆರಸಿದಂತಾಯಿತು ಕಲಿದೇವಯ್ಯಾ"

ನಿಮ್ಮ ಶರಣ ಸಿದ್ಧರಾಮಯ್ಯ ದೇವರು

ಎನಗೆ ಈ ಪಥವ ಕಲಿಸಿ, ನಿಜನಿವಾಸದಲ್ಲಿರಿಸಿದ ಕಾರಣ

ಆನು ನಮೋ ನಮೋ ಎನುತಿರ್ದೆನು.

ಮಾಚಯ್ಯನವರು ಐವರು ಪಂಚೇಂದ್ರಿಯಗಳೂ ಒಬ್ಬರಿಗೊಬ್ಬರು ಸಮವಿಲ್ಲ. ಪಂಚೇಂದ್ರಿಯಗಳನ್ನು ನಿಗ್ರಹಿಸಿಕೊಳ್ಳಲು ಶರಣ ಸಿದ್ಧರಾಮಯ್ಯ ದೇವರು ಪಥವನ್ನು ತಿಳಿಸಿದ ಕಾರಣ ನಮೋ ನಮೋ ಎನ್ನುತ್ತಿರುವೆನೆಂದು ಹೆಮ್ಮೆಯಿಂದ ಹೇಳುತ್ತಾರೆ. ಅಲ್ಲಮ ಪ್ರಭುಗಳ 'ದೇಹವೆಂಬುದು ತುಂಬಿದ ಬಂಡಿ ಕಂಡಯ್ಯಾ, ಕಾಲುಗಳೆಂಬವು ಗಾಲಿಕಂಡಯ್ಯಾ, ಬಂಡಿಯ ಹೊಡೆವವರೈವರು ಮಾನಿಸರು, ಒಬ್ಬರಿಗೊಬ್ಬರು ಸಮವಿಲ್ಲಯ್ಯಾ, ಅದರಿಚ್ಛೆಯನ್ನರಿದು ಹೊಡೆಯದಿರ್ದಡೆ, ಅದರಚ್ಚು ಮುರಿದಿತ್ತು ಕಾಣಾ ಗುಹೇಶ್ವರಾ' ಎನ್ನುವ ವಚನದಲ್ಲಿಯೂ ಪಂಚೇಂದ್ರಿಯಗಳ ನಿಗ್ರಹದ ಬಗ್ಗೆ ವ್ಯಾಖ್ಯಾನಿಸುವುದನ್ನು ಗಮನಿಸಬಹುದಾಗಿದೆ.

ಲೌಕಿಕ ಜಗತ್ತಿನಲ್ಲಿ ಹೊಟ್ಟೆಯನ್ನು ತುಂಬಿಸಿಕೊಳ್ಳುವುದೇ ಮುಖ್ಯ ಚಿಂತನೆಯಾಗಿ, ಹಗಲಿರುಳು ದುಡಿಮೆಯೇ ಮುಖ್ಯವಾದ ಸಂದರ್ಭವನ್ನು ಮಾಚಯ್ಯನವರು ಆಂತರಿಕ, ಮಾನಸಿಕ ತೊಳಲಾಟದೊಂದಿಗೆ ಕಲಿದೇವರಲ್ಲಿ ಭಿನ್ನವಿಸಿಕೊಂಡು, ಶಿವನನ್ನು ನೆನೆಯಲು ಸಮಯವಿಲ್ಲ, ಶಿವನನ್ನು ಪೂಜಿಸಲೂ ಸಮಯವಿಲ್ಲವಾಗಿದೆ. ಶಿವಮಂತ್ರವನ್ನು ಸ್ಮರಿಸಲು ಸಾಧ್ಯವಾಗದಿರುವ ಅನಿಶ್ಚಿತತೆಯ ಸ್ಥಿತಿಯನ್ನು, ಅತಂತ್ರತೆಯನ್ನು ಚಿತ್ತವತ್ತಾಗಿ ವಚನದ ಮೂಲಕ ಕಟ್ಟಿಕೊಡುವ ಪ್ರಯತ್ನಮಾಡಿದ್ದಾರೆ.

"ಒಡಲ ಹೊರೆವ ಇಚ್ಛೆಯಿಂದ

ಹಗಲೆನ್ನದೆ ಇರುಳೆನ್ನದೆ ಬೆಂದ ಬಸುರಿಂಗೆ ಕುದಿವುತ್ತಿದ್ದೇನೆ.

ನಿಮ್ಮ ನೆನೆಯಲೂ ವೇಳೆಯಿಲ್ಲ, ಪೂಜಿಸಲೂ ವೇಳೆಯಿಲ್ಲ

ಒಂದು ವೇಳೆಯಾದರೂ ಶಿವಮಂತ್ರವ ಸ್ಮರಿಸ ತೆರಪಿಲ್ಲ

ಈ ಪ್ರಯಾಸವ ಬಿಡಿಸಿ, ನಿಮ್ಮ ನೆನೆವಂತೆ ಮಾಡಯ್ಯಾ

ಕಲಿದೇವರದೇವಾ, ನಿಮ್ಮ ಧರ್ಮ, ನಿಮ್ಮ ಧರ್ಮ"[17]

ಎನ್ನುವ ವಚನದಲ್ಲಿ ವೇದ್ಯವಾಗುತ್ತದೆ.

ಇಷ್ಟದೈವವನ್ನು ನೆನೆಯುವ ಮನಕ್ಕೆ, ನೋಡುವ ಕಣ್ಣುಗಳಿಗೆ, ಪೂಜಿಸುವ ಕೈಗಳಿಗೆ ಕ್ರಮವಾಗಿ ಮಣ್ಣು, ಹೆಣ್ಣು, ಹೊನ್ನು ಎಂಬವು ಅಡ್ಡಿಯಾಗಿವೆ ಮನಸ್ಸನ್ನು ಕೇಂದ್ರೀಕರಿಸಲು ಇವೆಲ್ಲವೂ ಅಡಚಣೆಯಾಗಿವೆ. ಆಕರ್ಷಣೆಯಾಗಿರುವ ಹೆಣ್ಣು, ಹೊನ್ನು, ಮಣ್ಣುಗಳಿಂದಾಗಿ ಇಷ್ಟದೈವವನ್ನೇ ಮರೆಯುವಂತಾಯಿತೆನ್ನುವ ದುಃಖವಿರುವುದನ್ನು ಮಾಚಯ್ಯನವರ ವಚನದಲ್ಲಿ ಗುರುತಿಸಬಹುದು. ಅಲ್ಲದೆಯೇ ಭಗವಂತ – ಭಕ್ತರಿಬ್ಬರ ನಡುವಿನ ಆತ್ಮೀಯ ಸಂವಾದವನ್ನು, ಮನಸ್ಸು ಇವುಗಳಲ್ಲಿ ಸಿಲುಕಲು ಇಷ್ಟದೈವವೇ ರೂಪಿಸಿದ ಬನಪು ಕಾರಣವಾಯಿತೆನ್ನುವ ವಿವೇಚನೆಯ ಮಾತುಗಳೂ, ಭಕ್ತನೊಬ್ಬನ ಬೆರಗಾಗುವಿಕೆ, ಆಶ್ಚರ್ಯ ಚಕಿತತೆಯು ಗೋಚರಿಸುತ್ತದೆ, ಮಾತ್ರವಲ್ಲದೇ ಇವೆಲ್ಲವುಗಳಿಂದ ಬಿಡುಗಡೆಗೊಳ್ಳಬೇಕೆಂಬ ಬಯಕೆಯು ಭಕ್ತನಿಗಿರಬೇಕೆಂಬ ಸಂದೇಶವನ್ನು ಪರೋಕ್ಷವಾಗಿ ಮಾಚಯ್ಯನವರು ಸಾರುತ್ತಾರೆ.

"ನೆನೆವ ಮನಕ್ಕೆ ಮಣ್ಣ ತೋರಿದೆ

ನೋಡುವ ಕಂಗಳಿಗೆ ಹೆಣ್ಣ ತೋರಿದೆ

ಪೂಜಿಸುವ ಕೈಗಳಿಗೆ ಹೊನ್ನ ತೋರಿದೆ.

ಈ ತ್ರಿವಿಧವನೆ ತೋರಕೊಟ್ಟು ಮರಹನಿಕ್ಕಿದೆಯಯ್ಯಾ

ಅಮರಗುಂಡ ಮಲ್ಲಿಕಾರ್ಜುನಯ್ಯಾ. ನೀ ಮಾಡಿದ

ಬಿನ್ನಾಣಕ್ಕಾನು ಬೆರಗಾದೆ ಕಾಣಾ, ಕಲಿದೇವರ ದೇವ."[18]

**4. ಏಕದೇವೋಪಾಸನೆ ಕುರಿತ ಚಿಂತನೆಗಳು :**

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶಿವಶರಣರು ಬಹುದೇವೋಪಾಸನೆಯನ್ನು ಖಂಡಿಸಿ ಏಕದೇವೋಪಾಸನೆಯನ್ನು ಸಮರ್ಥವಾಗಿ ಪ್ರತಿಪಾದಿಸಿ ಇಷ್ಟಲಿಂಗೋಪಾಸನೆಯ ಮೂಲಕ ಅದನ್ನು ಆಚರಣೆಯಲ್ಲಿ ತಂದಿರುವುದು ಧಾರ್ಮಿಕ ಇತಿಹಾಸದಲ್ಲೊಂದು ಮೈಲುಗಲ್ಲಾಗಿದೆ. ಪ್ರಾಚೀನ ಕಾಲದಿಂದಲೂ ಏಕದೇವೋಪಾಸನೆ ಭಾರತದಂತಹ ದೇಶದಲ್ಲಿ ಪ್ರತಿಪಾದಿಸಲ್ಪಟಿದೆ.

"ಏಕಂ ಸತ್ ವಿಪ್ರಾ ಬಹುಧಾ ವದಂತಿ" ಪರಾತ್ಪರ ಸತ್ಯ ಅಥವಾ ದೇವನೊಬ್ಬನೆ. ಬಲ್ಲವರು ಆತನನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆಂಬ ಉಪನಿಷದ್ವಾಕ್ಯ ಈ ಮಾತನ್ನು ದೃಢೀಕರಿಸುತ್ತದೆ. ಪರಾತ್ಪರ ಸತ್ಯಕ್ಕೆ ಶರಣರು 'ಬಯಲೆ'ಂದು ಕರೆದರು. 'ಶೂನ್ಯ'ವೆಂದು ಪ್ರತಿಪಾದಿಸಿದರು. 'ಶೂನ್ಯ' ಅಥವಾ 'ಬಯಲು' ಸಚ್ಚಿದಾನಂದ ಸ್ವರೂಪವಾದದ್ದು. ಅದರ ಇನ್ನೊಂದು ಹೆಸರು 'ಲಿಂಗ' ಅಥವಾ 'ಪರಶಿವ' ಎಂದು

ಅರ್ಥೈಸಲಾಯಿತು. ಇದರ ಕುರುಹೇ ಇಷ್ಟಲಿಂಗ ಇದರ ಉಪಾಸನೆಯ ಮೂಲಕ ಏಕದೇವೋಪಾಸಕರಾಗಬೇಕೆಂದು ಶರಣರು ಸಾರಿದರು.

ಒಂದು ಅಧ್ಯಾತ್ಮ ಪಥವನ್ನಾರಿಸಿಕೊಂಡು, ಒಂದು ದೈವವನ್ನು ನಂಬಿ ನಮ್ಮ ಸಾಧನೆಯನ್ನು ಮುಂದುವರೆಸುವುದೆಂದರೆ ಮದುವೆ ಮಾಡಿಕೊಂಡು ಒಬ್ಬ ಗಂಡನನ್ನು ನಂಬಿ ಸಂಸಾರ ಹೂಡಿದಂತೆ, ತನ್ನ ದೈವವನ್ನು ಬಿಟ್ಟು ಅನ್ಯದೈವವನ್ನು ಉಪಾಸಿಸುವವರು ಹಾದರ ಮಾಡಿದಂತೆ. ಈ ಕಾರಣವಾಗಿ ಪರಮ ಪತಿವ್ರತೆಗೆ ಒಬ್ಬ ಗಂಡನಿದ್ದಂತೆ ನಮ್ಮ ಅಧ್ಯಾತ್ಮ ಸಾಧನೆಗೆ ಒಂದೇ ದೈವೋಪಾಸನೆಯನ್ನು ನಂಬಿ ಮುಂದೆ ಸಾಗಬೇಕು. ಇದಕ್ಕೆ ಉತ್ಕಟವಾದ ಛಲವಂತಿಕೆ ಬೇಕು. ಅದಕ್ಕಾಗಿಯೇ ಬಸವಣ್ಣನವರು 'ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ' ಎಂದು ಸಾರಿದ್ದಾರೆ.

"ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ ಕಿವಿ ಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬುವನನೇನೆಂಬೆ
ಕೂಡಲಸಂಗಮದೇವಾ"[19]

ಬಸವಣ್ಣನವರಂತೆಯೇ, ಮಡಿವಾಳ ಮಾಚಯ್ಯನವರ ಹತ್ತಕ್ಕೂ ಹೆಚ್ಚು ವಚನಗಳಲ್ಲಿ ಏಕದೇವೋಪಾಸನೆಯ ಮಹತ್ವವನ್ನು ಅಭ್ಯಸಿಸಬಹುದಾಗಿದೆ. ಶಿವಭಕ್ತನಾದವನು "ಏಕಲಿಂಗಾನಿಷ್ಠ"ನಾಗಿರಬೇಕು. ಶಿವಾಚಾರಕ್ಕಾಗಿ ಸತ್ತರೆ ಮಾತ್ರವೇ ಮುಕ್ತಿಯಮಾರ್ಗವೆನ್ನುತ್ತಾರೆ. ಹೆಣ್ಣು, ಹೊನ್ನು, ಮಣ್ಣುಗಳಿಗಾಗಿ, ಲೌಕಿಕ ಕಾಮನೆಗಳಿಗಾಗಿ, ವಿಷಯಾಸಕ್ತರಾದವರಿಗೆ ಜನನ ಮರಣಗಳುಂಟು, ಶಿವಾಚಾರ ಸಂಪನ್ನರಾದವರಿಗೆ ಮುಕ್ತಿಯುಂಟು ಎಂದು ಮಾಚಯ್ಯನವರು ವಿಶ್ಲೇಷಿಸುತ್ತಾರೆ. ಲಿಂಗನಿಷ್ಠೆಯನ್ನರಿಯದೆ, ಅನ್ಯದೈವ್ಯಗಳ ಭಜಿಸುವ ಮರುಳರು, ಭಂಗಿತರೊಡಗೂಡಬಾರದೆಂದು, ಅಂತಹವರೊಂದಿಗೆ ಬೆರೆತು ಕೆಡಬೇಡವೆಂದು ಎಚ್ಚರಿಸುತ್ತಾರೆ. ಜಕ್ಕಿ, ಜಕ್ಕಿ, ಎಕ್ಕನಾತಿ, ಮಾಯಿರಾಣಿ, ಕುಕ್ಕನೂರ ಬಸದಿ, ಚೌಡಿ, ಮೈಲಾರ, ಜಿನ್ನ, ಕುಂಟಭೈರವ ಮೊದಲಾದವರೆಲ್ಲ ಭೂತ ಪ್ರೇತ ಪಿಶಾಚಿ ದೇವರೆಲ್ಲರೂ ಅಕ್ಕಸಾಲೆಯ ಕುಪ್ಪಟ್ಟಿಗೆ ಬಂದು ಸುಡುಗಾಡಾಯಿತು. ಈರೇಳು ಭುವನಕ್ಕೆ ಕರ್ತನೊಬ್ಬನೆ, ಆತನೆ ಆದಿ, ಲಿಂಗವಂತನಾದವನಿಗೆ ಸೂತಕವೆನ್ನುವ ನುಡಿಗಳನ್ನು ಕೇಳಲಾಗದು. ಸತ್ತಿರುವ ಕೋಣ, ಕುರಿ, ಕೋಳಿ ತಿನ್ನುವ ಭೂತ ಪ್ರೇತ ದೈವದ ಎಂಜಲನ್ನು ಭುಂಜಿಸುವವರಿಗೆ ಏಳೇಳು ಜನ್ಮದಲ್ಲಿ ನಕರ ತಪ್ಪುವುದಿಲ್ಲವೆಂದು ಮಾಚಯ್ಯನವರು ವಚನಗಳಲ್ಲಿ ವಿಶ್ಲೇಷಿಸಿದ್ದಾರೆ. ಹಾಗೆಯೇ ಗುರುವಿನ ಮೂಲಕ ಕರಸ್ಥಲದಲ್ಲಿರುವ ಲಿಂಗದ ಮಹತ್ವವನ್ನು ಅರಿತುಕೊಳ್ಳದೆ, ಇಷ್ಟಲಿಂಗದ ಪೂಜೆಗೈಯದೆ ಧರೆಯ ಮೇಲೆ ಪ್ರತಿಷ್ಠಾಪನೆಗೊಂಡಿರುವ ತೀರ್ಥಕ್ಷೇತ್ರಗಳ ದೈವಗಳಿಗೆರಗುವವರಿಗೆ ಅಘೋರವಾದ ನರಕ ಪ್ರಾಪ್ತಿಯಾಗದೇ ಇರದು ಎನ್ನುತ್ತಾರೆ.

"ಗುರು ಕೊಟ್ಟ ಲಿಂಗ ತನ್ನ ಕರಸ್ಥಲದಲ್ಲಿರುತಿರಲು
ಧರೆಯ ಮೇಲೆ ಪ್ರತಿಷ್ಠಿಸಿದ ಭವಿಶೈವದೈವ
ತೀರ್ಥಕ್ಷೇತ್ರಂಗಳಿಗೆ ಪರಿದುಹೋಗುವ ಪರವಾದಿಗಳಿಗೆ
ಅಘೋರ ನರಕ ತಪ್ಪದೆಂದ ಕಲಿದೇವಯ್ಯ"[20]

ನಾವು ಲಿಂಗವಂತರೆಂದು ಪ್ರತಿಬಿಂಬಿಸಿಕೊಂಡು, ನಮಗೆ ಇಷ್ಟಲಿಂಗವುಂಟೆಂದು ಸಾರುತ್ತಾ, ಮತ್ತೆ ಮತ್ತೆ ಶರಣನೆನ್ನುವುದನ್ನು ಮರೆತು ಭವಿಶೈವದೈವಗಳನ್ನು ಆರಾಧಿಸಿ ಅವುಗಳಿಗೆ ನಮಸ್ಕರಿಸುವ ಮಂಗನಂತಹ ಮಾನವರನ್ನು ಏನೆಂದು ಹೇಳಲಿ? ಎಂದು ಅಪಹಾಸ್ಯಮಾಡಿದ್ದಾರೆ ಮಾಚಯ್ಯನವರು. ಪಾಪಿಯಾದವರಿಗಾದರೂ ಪ್ರಾಯಶ್ಚಿತ್ತವಿರುತ್ತದೆ. ಪರವಾದಿಗಳಿಗೂ ಪ್ರಾಯಶ್ಚಿತ್ತವುಂಟು, ಶಿವಭಕ್ತರಾಗಿದ್ದುಕೊಂಡು ಅನ್ಯದೈವಗಳನ್ನು ಪೂಜಿಸುವವರಿಗೆ ಯಾವುದೇ ಪ್ರಾಯಶ್ಚಿತ್ತವಿಲ್ಲ. "ಕರಸ್ಥಲ ದೇವನಿದ್ದಂತೆ, ಧರೆಯ ಮೇಲಣ ಪ್ರತಿಷ್ಠೆಗೆರಗುವ ಈ ನರಕಿ ನಾಯಿಗಳನೇನೆಂಬೆನಯ್ಯಾ?' ವೆಂದು ಪ್ರಶ್ನಿಸುತ್ತಾರೆ? ಗುರುವಿನ ಮೂಲಕ ಉಪದೇಶ ಪಡೆದುಕೊಂಡು, ಪ್ರಸಾದವನ್ನು ಕಡೆಗಣಿಸಿ, ಪಂಚಮಹಾಪಾತಕರೆನಿಸಿಕೊಂಡು, ಕ್ಷುದ್ರ ದೈವಗಳನ್ನು ಪೂಜಿಸಿ ಅವುಗಳಿಗೆ ಎರಗುವವರನ್ನು ಕಂಡರೆ ಮನಸ್ಸು ಅಸಹ್ಯಪಡುತ್ತದೆ, ಅವರೊಂದಿಗೆ ಒಡನಾಡಲೂ ನಾಚಿಕೆಯಾಗುತ್ತದೆ ಎನ್ನುತ್ತದೆ ಮಾಚಯ್ಯನವರ ಮುಂದಿನ ವಚನ ಭಾಗ –

"ಗಂಡನೆಂಜಲಿಗೆ ಹೇಸುವಳು, ಮಿಂಡನ ತಂಬುಲ ತಿಂಬ ತೆರನಂತೆ
ಗುರುವಿನಲ್ಲಿ ಉಪದೇಶ ಪಡೆದು ಪ್ರಸಾದಕ್ಕೆ ಸೂತಕವ ಮಾಡುವ
ಪಂಚಮಹಾಪಾತಕರು ನೀವು ಕೇಳಿ ಭೋ.
ಅಂಡದೊಳಗೆ ಹುಟ್ಟಿದ ಉತ್ಪತ್ತಿಯೆಲ್ಲವೂ ಗುರುವಿಂದಾಯಿತ್ತು
ಮತ್ತೆ ಮಿಂಡ ಮೈಲಾರ ಬೀರ ಭೈರವ ಯಕ್ಕನಾತಿ
ಕುಕ್ಕನೂರ ಬಸದಿ ಕೇತಧೂಳನೆಂಬ ಕಾಳುದೈವಕ್ಕೆರಗಿ
ಶಿವಭಕ್ತನೆನಸಿಕೊಂಬ ಚಂಡಿನಾಯಿಗಳ ಕಂಡು
ಎನ್ನ ಮನ ಹೇಸಿತ್ತು ಕಾಣಾ, ಕಲಿದೇವರದೇವಾ"[21]

ಎಂಭತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ಅಜ್ಞಾನದಿಂದ ಜನಿಸಿ, ಶಿವನೊಡ್ಡಿದ ಮಾಯಾಗುಣಗಳಿಂದ ತನ್ನನ್ನು ಅರ್ಥೈಸಿಕೊಳ್ಳದೆಯೇ, ಶಿವನ ಅನುಗ್ರಹದಿಂದ ಮನುಷ್ಯ ಜನ್ಮದಲ್ಲಿ ಹುಟ್ಟಿದ ಶಿವಭಕ್ತನು, ಇಡೀ ಮನುಷ್ಯ ಜನ್ಮದಲ್ಲಿಯೇ ಶ್ರೇಷ್ಠವಾದ ಶಿವಭಕ್ತಿಯನ್ನು ಗಳಿಸಿಕೊಂಡು ನೇಮ, ಸತ್ಯ, ಸದಾಚಾರ ಸಂಪನ್ನತೆಯಿಂದ ನಡೆದುಕೊಂಡು ಅನ್ಯದೈವಗಳಿಗೆ ಎರಗದೆ ಏಕಲಿಂಗ ನೇಮನಿಷ್ಠೆಯಿಂದ ತನ್ನ ಕಷ್ಟಗಳನ್ನು ಗೆಲ್ಲಬೇಕು ಇಲ್ಲದಿದ್ದೊಡೆ ನರಕ ಪ್ರಾಪ್ತಿಯಾಗುತ್ತದೆನ್ನುವ ವಿಶ್ಲೇಷಣೆ ಮಾಚಿದೇವನ ವಚನದಲ್ಲಿ ಅಡಕಗೊಂಡಿದೆ. ಇಲ್ಲಿಯೂ ಏಕಲಿಂಗ ನಿಷ್ಠೆಯನ್ನು ಏಕದೇವೋಪಾಸನೆಯ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಾರೆ.

5. ಸ್ಥಾವರ – ಜಂಗಮತ್ವದ ವಿಶ್ಲೇಷಣೆ:

"ಉಳ್ಳವರು ಶಿವಾಲಯವ ಮಾಡುವರು!
ನಾನೇನ ಮಾಡುವೆ? ಬಡವನಯ್ಯಾ!
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಳಶವಯ್ಯ!
ಕೂಡಲಸಂಗಮದೇವ ಕೇಳಯ್ಯ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"! [22]

ಬಸವಣ್ಣನವರ ಪ್ರಸಿದ್ಧವಾದ ವಚನವಿದು. ಈ ವಚನದ ಕಡೆಯ ಸಾಲು 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎನ್ನುವ ಸೂತ್ರಬದ್ಧವಾದ ಸಾಲು ಬಸವಣ್ಣನವರಾದಿಯಾಗಿ ವಚನಕಾರರೆಲ್ಲರೂ ನಡೆಸಿದ ವಚನ ಚಳುವಳಿಯ ಧ್ಯೇಯವಾಕ್ಯದಂತೆ ಕಂಡು ಬರುತ್ತದೆ. ಸಮಾಜದ ಬಗ್ಗೆ ಜೀವನದ ಬಗ್ಗೆ ವಚನಕಾರರು ಕೈಗೊಂಡ ಎಲ್ಲ ಚಿಂತನೆಗಳ ಸಾರವೇ ಈ ಸಾಲುಗಳಲ್ಲಿ ಅಡಕಗೊಂಡಿದೆ. ಅಂದಿನ ಸಮಾಜದಲ್ಲಿ ಕೆಳಸ್ತರದವರಿಗೆ ದೇವಾಲಯ ಪ್ರದೇಶ ನಿಷಿದ್ಧವಾದ ಸಂದರ್ಭದಲ್ಲಿ ಇಡೀ ದೇಹವನ್ನೇ ದೇವಾಲಯಕ್ಕೆ ಹೋಲಿಕೆ ಮಾಡಿ, ಕಾಲುಗಳನ್ನೇ ಕಂಬದಂತೆ ಪರಿಭಾವಿಸಿ, ಶಿರವನ್ನು ದೇವಾಲಯದ ಮೇಲಿನ ಹೊನ್ನಿನ ಕಳಸದಂತೆ ತಿಳಿದು ಅಂತರಂಗದಲ್ಲಿ ದೇವರನ್ನು ಪ್ರತಿಷ್ಠಾಪಿಸಿಗೊಂಡು ಶಿವಭಕ್ತಿಯನ್ನು ಪ್ರಕಟಪಡಿಸುವ ಸೊಬಗು ನಿಜಕ್ಕೂ ವಿಶೇಷವಾಗಿದೆ. ಉಳ್ಳವರ ದರ್ಪ, ದೌರ್ಜನ್ಯಗಳು, ಇಲ್ಲದವರ ಪರವಾದ ಸಾಮಾಜಿಕ ಶೋಷಣೆಯ ಮುಖಗಳು, ಸಿರಿತನ, ಬಡತನವೆಂಬ ತಾರತಮ್ಯತೆ ದೇವರಿಗಿಲ್ಲ, 'ಸ್ಥಾವರ'ವಾದ, ಸ್ಥಿರವಾದ ದೇವಾಲಯಗಳು ನಾಶವಾಗುತ್ತವೆ. 'ಜಂಗಮ' ಸ್ವರೂಪಿಯಾದ ಶರಣರ ಮತ್ತು ಶಿವಸ್ವರೂಪವನ್ನು ನಾಶಪಡಿಸಲು ಅಸಾಧ್ಯವೆನ್ನುತ್ತಾರೆ. ಸ್ಥಾವರವು ಜನವಿರೋಧಿ ಮನೋಭಾವಕ್ಕೆ ಸಂಕೇತವಾಗಿ ಗೋಚರಿಸಿದರೆ, ಜಂಗಮತ್ವವು ಜೀವಪರವಾದ ಧೋರಣೆಗೆ ಸಂಕೇತವಾಗಿ ನಿಲ್ಲುತ್ತದೆ. ಬಸವಣ್ಣನ ಮಾತುಗಳ ಹಿನ್ನೆಲೆಯ ಅರ್ಥವೆಲ್ಲ ಎಷ್ಟೋ ಸಂದರ್ಭಗಳಲ್ಲಿ ಸ್ಥಾವರ ಜಂಗಮದ ಅರ್ಥವ್ಯತ್ಯಾಸದ ಮೂಲಕವೇ ನಡೆಯುತ್ತದೆ.

'ಸ್ಥಾವರ' ಎನ್ನುವುದು ಕಲ್ಲು ಲಿಂಗವನ್ನು ಹೇಗೆ ಸೂಚಿಸುತ್ತದೆಯೋ, ಹಾಗೆಯೇ ಎಲ್ಲ ಜಡವಾದ, ಸಂವೇದನಾರಹಿತವಾದ, ಜನವಿರೋಧಿಯಾದ ವಸ್ತು– ಆಲೋಚನೆ – ವ್ಯವಸ್ಥೆಗಳಿಗೆ ಸಂಕೇತ, 'ಜಂಗಮ' ತದ್ವಿರುದ್ಧವಾಗಿ ಜೀವನಪರವಾದ ಆಶಯಗಳಿಗೆ ಸಂಕೇತವಾಗಿದೆ. ಬಸವಣ್ಣನವರಂತೆಯೇ ಮಡಿವಾಳ ಮಾಚಯ್ಯನವರ ವಚನಗಳಲ್ಲಿ 'ಸ್ಥಾವರ' ಪರಿಕಲ್ಪನೆಯನ್ನು ಕಾಣಬಹುದಲ್ಲದೇ, ಗುಡಿಸಂಸ್ಕೃತಿಯ ನಿರಾಕರಣೆಯನ್ನು ಗುರುತಿಸಲು ಸಾಧ್ಯವಿದೆ. ತನ್ನ ಶರೀರದೊಳಗಿರುವ ಆತ್ಮಲಿಂಗವನ್ನು ಮರೆತು ಅಥವಾ ಅಂಗದ ಎದೆ ಮೇಲೆ, ಹೃದಯದ ಮೇಲೆ ಧರಿಸಿರುವ ಇಷ್ಟಲಿಂಗವನ್ನು ಬಿಟ್ಟು ದೇಗುಲದಲ್ಲಿರುವ ಮಂದಿರದೊಳಗಿರುವ ಲಿಂಗಕ್ಕೆ ಹೋಗಿ ನಮಸ್ಕರಿಸುವ ಜನಸಮೂಹಕ್ಕೆ ಏನೆನ್ನಬೇಕು? ತಿಳಿಯದವಾಗಿದೆ

ಎಂದು ನುಡಿಯುತ್ತಾರೆ. ಇಷ್ಟಲಿಂಗವನ್ನು ಕಡೆಗಣಿಸಿ, ಸ್ಥಾವರಲಿಂಗದ ಪ್ರತಿಷ್ಠೆಗೆ ಶರಣೆಂದರೆ, ಇಷ್ಟಲಿಂಗದ ಚೈತನ್ಯವೆಲ್ಲ ದೂರವಾಗಿ, ಶರಣನಾದವನು ಭ್ರಷ್ಟನಾಗಿ ಕೆಟ್ಟು ನರಕಕ್ಕಿಳಿಯುತ್ತಾನೆ. ಇದರಲ್ಲಿ ಯಾವುದೇ ಅನುಮಾನವಿಲ್ಲವೆಂದು ಹೇಳುತ್ತಾರೆ ಮಡಿವಾಳ ಮಾಚಯ್ಯನವರು.

"ಉಡಿಯ ಲಿಂಗವ ಬಿಟ್ಟು, ಗುಡಿಯಲಿಂಗಕ್ಕೆ

ಶರಣೆಂಬ ಮತಿಭ್ರಷ್ಟರನೇನೆಂಬೆನಯ್ಯಾ ಕಲಿದೇವರದೇವ"

ಎಂದು ಉದ್ಗಾರ ತೆಗೆಯುತ್ತಾ ಇಂತಹವರೆಲ್ಲರೂ ಮತಿಹೀನರು ಎಂದು ಖಾರವಾಗಿ ಟೀಕಿಸುತ್ತಾರೆ. ಮುಂದುವರೆದಂತೆ, ತಮ್ಮ ವಚನದಲ್ಲಿ "ಊರ ಕಲ್ಲಿಗೆ ಉರದ ಲಿಂಗವಡಿಯಾಗಿ ಬೀಳುವ ಕ್ರೂರ ಕರ್ಮಿಗಳನೇನೆಂಬೆನಯ್ಯಾ" ಎಂದು ವಿಡಂಬಿಸುತ್ತಾರೆ.

ಕಲ್ಲು, ಮಣ್ಣುಗಳ ನಡುವೆ ಪ್ರತಿಷ್ಠಾಪನೆಗೊಂಡಿರುವ ಲಿಂಗಕ್ಕೆ ಹೊಟ್ಟೆ ಕೆಳಗೆ ಮಾಡಿ ದೀರ್ಘ ದಂಡ ಪ್ರಣಾಣಗೈಯ್ಯುವವರು ಲೊಟ್ಟೆಗುಡಿಹಿಗಳು ವಿನಃ ಬೇರೇನೂ ಅಲ್ಲವೆನ್ನುವ ಎದೆಗಾರಿಕೆ ಮಾಚಯ್ಯನವರಲ್ಲಿದೆ.

"ಹುಟ್ಟಿದ ಕಲ್ಲಿಗೆ, ನೆಟ್ಟ ಪ್ರತಿಷ್ಠೆಗೆ

ಕಟ್ಟಿದ ಲಿಂಗವಡಿಯಾಗಿ ಬೀಳುವ

ಲೊಟ್ಟಿಗುಡಿಹಿಗಳನೇನೆಂಬೆನಯ್ಯಾ, ಕಲಿದೇವರ ದೇವ" [23]

ಮಡಿವಾಳ ಮಾಚಯ್ಯನವರಂತೆಯೇ ಅಂಬಿಗರ ಚೌಡಯ್ಯನವರೂ ಕೂಡ ಬಹಳ ಪ್ರಖರವಾಗಿ ಮತ್ತು ಕತ್ತಿಯ ಅಂಚಿನಂತೆ ಹರಿತವಾದ ಮಾತುಗಳಿಂದ ಗುಡಿ ಸಂಸ್ಕೃತಿಯನ್ನು ಸ್ಥಾವರವನ್ನು ವಿಡಂಬಿಸುತ್ತಾರೆ.

"ಕಟ್ಟಿದ ಲಿಂಗವನು ಬಿಟ್ಟು ಬೆಟ್ಟದಲಿಂಗಕ್ಕೆ ಹೋಗಿ,

ಹೊಟ್ಟಡಿ ಬೀಳುವ ಖೊಟ್ಟಿ ಮೂಳರ ಕಂಡಂಡೆ,

ಮೆಟ್ಟಿದ್ದ ಎಡ ಪಾದರಕ್ಷೆಯ ತಗೊಂಡು

ಲಟಲಟನೆ ಹೊಡೆಯೆಂದಾತ ಅಂಬಿಗರ ಚೌಡಯ್ಯ" [24]

ಮಡಿವಾಳ ಮಾಚಯ್ಯನವರು ಅಂಗದ ಮೇಲಿನ ಲಿಂಗವನ್ನು ಮರೆತು ಗುಡಿಯ ಲಿಂಗಕ್ಕೆ ಸಾಷ್ಟಾಂಗ ಎರಗುವವರನ್ನು ನೋಡಲಾಗದೆಂದು ಸೌಮ್ಯರೀತಿಯಲ್ಲಿ ವಿಡಂಬಿಸಿದರೆ ಅಂಬಿಗರ ಚೌಡಯ್ಯನಂತಹವರು ಮುಲಾಜಿಲ್ಲದೆ ಕೂರಂಬಿನಂತೆ ನಾಟುವ ರೀತಿಯಲ್ಲಿ ವಚನಗಳನ್ನು ರಚಿಸಿದ್ದಾರೆ. ನೇರವಾದ ನಡೆ – ನೇರವಾದ ನುಡಿ, ಮತ್ತೊಬ್ಬರಿಗೆ ಹಿತವಾಗುವಂತೆ ನುಡಿಯದೆ ಇದ್ದುದ್ದನ್ನೂ ಇದ್ದಂತೆಯೇ ಸಿಡಿಲಬ್ಬರದ ನುಡಿಗಳು ವಚನಕಾರರದ್ದು. ಗುಡಿ ಸಂಸ್ಕೃತಿಯು  ನಾಶವಾಗಿ ಇಷ್ಟ ಲಿಂಗದ ಮಹತ್ವವನ್ನೂ, ಅಂಗದ ಮೇಲಿನ ಲಿಂಗದ ಶ್ರೇಷ್ಠತೆಯನ್ನು ಅರಿಯಬೇಕೆನ್ನುವ ಹೊಳಹು ಮಾಚಯ್ಯನವರ ವಚನದಲ್ಲಿ ಅಡಕವಾಗಿದೆ.

### 6. ಅಂತರಂಗ – ಬಹಿರಂಗ ಶುದ್ಧಿಯ ಚರ್ಚೆ :

ವಚನ ಸಾಹಿತ್ಯದಲ್ಲಿನ ಪ್ರಮುಖ ಪರಿಕಲ್ಪನೆಗಳೊಂದಾದ 'ಅಂತರಂಗಶುದ್ಧಿ – ಬಹಿರಂಗಶುದ್ಧಿಯ' ಚರ್ಚೆಯು ಬಹುತೇಕ ವಚನಕಾರರಲ್ಲಿ ಕಾಣುವ ಸಾಮಾನ್ಯದ ಅಂಶವಾಗಿದೆ. ಅತ್ಯಂತ ಸರಳವಾಗಿ, ನೇರವಾಗಿ, ಅರ್ಥಗರ್ಭಿತವಾದ ವಿಚಾರಗಳನ್ನು ಸುಂದರವಾದ ಬೋಧನಾತ್ಮಕ ನಿಲುವಿನ ವಚನಗಳಲ್ಲಿ ಕಾಣಲು ಸಾಧ್ಯವಿದೆ. ದೇವರನ್ನು ಒಲಿಸಿಕೊಳ್ಳಬೇಕಾದರೆ ದೇಹದ ಪರಿಶುದ್ಧತೆಗಿಂತಲೂ, ಕಠಿಣ ನಿಯಮಗಳ ಆಚರಣೆಗಳಿಗಿಂತಲೂ ಮನಸ್ಸಿನ ಕೊಳಕು ಆಲೋಚನೆಗಳನ್ನು ಪರಿಶುದ್ಧಗೊಳಿಸಿಕೊಂಡು, ಮನಸ್ಸಿನ ಶುಚಿತ್ವಕ್ಕ ನುಗುಣವಾದ ಆಲೋಚನೆಗಳಿಗೆ ಎಡೆಕೊಟ್ಟು ಅಂತರಂಗ – ಬಹಿರಂಗ ಶುದ್ಧಿಯ ಮೂಲಕ ಜೀವನ ಸಾರ್ಥಕಗೊಳಿಸಿಕೊಳ್ಳಬೇಕೆಂದು ಬಸವಣ್ಣಾದಿಯಾಗಿ, ಮಾಚಯ್ಯನಂತಹವರಲ್ಲಿ, ದಾಸಿಮಯ್ಯನ ಹಾಗೂ ಮುಂತಾದ ಶರಣರಲ್ಲಿ ಗುರುತಿಸಬಹುದಾಗಿದೆ. ಅಂತರಂಗಶುದ್ಧಿ ಇಲ್ಲದವರಲ್ಲಿ ಭಕ್ತಿಯು ಪ್ರಕಟಗೊಂಡರೂ ಅಂತಹ ಭಕ್ತಿಯು ದೇವರನ್ನು ತಲುಪದೇ ವ್ಯರ್ಥವಾಗುತ್ತದೆ. ಅಳಿಮನದವನ ಭಕ್ತಿಯು ನಿರರ್ಥಕವಾಗಿ ಯಾವುದೇ ಸಕಾರಾತ್ಮಕ ಪ್ರತಿಫಲವನ್ನು ಗಳಿಸುವುದಿಲ್ಲ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ!
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ !
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ!
ಇದೇ ಅಂತರಂಗ ಶುದ್ಧಿ! ಇದೇ ಬಹಿರಂಗ ಶುದ್ಧಿ!
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ"! [25]

ಜಾಗತಿಕ ಸಂವಿಧಾನವನ್ನು ರೂಪಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲಬೇಕು. ನೂರಾರು ವರ್ಷಗಳ ನಂತರವೂ ಸಪ್ತಸೂತ್ರಗಳನ್ನು ಪರಿಪಾಲಿಸಿದ್ದೇ ಆದರೆ ಅದೇ ಅಂತರಂಗಶುದ್ಧಿ ಅದೇ ಬಹಿರಂಗಶುದ್ಧಿಯಾಗಿ ದೇವರು ಒಲಿಯುತ್ತಾನೆ. ಕಾಯಶುದ್ಧಿ, ವಾಕ್‌ಶುದ್ಧಿ, ಮನಶ್ಶುದ್ಧಿಯನ್ನು ಮೇಲಿನ ವಚನ ಭಾಗದಲ್ಲಿ ನಿರೂಪಿಸಿದ್ದಾರೆ. ಕಳ್ಳತನ ಮಾಡಬೇಡ, ಕೊಲೆಮಾಡಬೇಡವೆನ್ನುವುದು ಕಾಯಶುದ್ಧಿಯಾದರೆ, ಸುಳ್ಳು ಹೇಳದೆ, ಪರದೂಷಣೆಯಲ್ಲಿ ತೊಡಗದಿರುವುದು, ಆತ್ಮ ಪ್ರಶಂಸೆಯಲ್ಲಿ ತೊಡಗದಿರುವುದೇ ವಾಕ್‌ಶುದ್ಧಿ, ಕೋಪಿಸಿಕೊಳ್ಳದೆ ಅನ್ಯರಿಗೆ ಅಸಹಿಷ್ಣುತೆಯನ್ನು ಸೂಚಿಸದಿರುವುದೇ ಮನಶ್ಶುದ್ಧಿ ಇವೆಲ್ಲದರ ಒಟ್ಟು ಅಂದವೇ ಅಂತರಂಗದ ಬಹಿರಂಗ ಶುದ್ಧಿಯಾಗಿ ದೇವನನ್ನು ಒಲಿಸುವ ಮಾರ್ಗವಾಗುತ್ತದೆ. ಇಂತಹುದೇ ಅಂತರಂಗದ ಚರ್ಚೆಯನ್ನು ಮಾಚಯ್ಯನವರ ವಚನದಲ್ಲೂ ಕಾಣಬಹುದು.

"ಪರಸ್ತ್ರೀಯರ ನೋಡುವ ಕಣ್ಣು,
ಲಿಂಗವ ನೋಡಿದ ಅವರಿಗೆ ಲಿಂಗವಿಲ್ಲ
ಪರಬ್ರಹ್ಮನ ನುಡಿವ ನಾಲಿಗೆಯಲ್ಲಿ

ಪರಸ್ತ್ರೀಯರ ಅಧರ ಪಾನವ ಕೊಂಡಡೆ,

ಪ್ರಸಾವಕ್ಕೆ ದೂರ.

ಘನಲಿಂಗವ ಪೂಜಿಸುವ ಕೈಯಲ್ಲಿ

ಪರಸ್ತ್ರೀಯರ ತೋಳು ಕುಚವ ಮುಟ್ಟಿದಡೆ,

ತಾ ಮಾಡುವ ಪೂಜೆ ನಿಷ್ಫಲ.

ಇದರನರಿದೆಡೆ ವ್ರತ

ಅಲ್ಲದಿರ್ದಡೆ, ಸುರೆ ಒಳಗೆ ತುಂಬಿ

ಹೊರಗೆ ಬೂದಿಯ ಪೂಸಿದಂತಾಯಿತ್ತು, ಕಲಿದೇವಾ" [26]

'ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮದೇವ' ಎನ್ನುವ ಬಸವಣ್ಣನವರ ವಚನದಂತೆಯೇ ಪರಸ್ತ್ರೀಯರ ವ್ಯಾಮೋಹ ಸಲ್ಲದು, ನಿಜವಾದ ನೇಮ– ವ್ರತಗಳ ವ್ಯಾಖ್ಯಾನದೊಂದಿಗೆ ಅಂತರಂಗ ಶುದ್ಧಿ ಇಲ್ಲದೆಯೇ ಕೈಗೊಳ್ಳುವ ಕ್ರಿಯೆಗಳು ಸುರೆ ತುಂಬಿದ ಪಾತ್ರೆಯ ಹೊರಭಾಗಕ್ಕೆ ಬೂದಿಯ ಬಳಿದಂತೆ ಟೀಕೆಗೊಳಗಾಗುತ್ತದೆ. ಕಣ್ಣು, ನಾಲಿಗೆ, ಕೈಗಳು ಸದಾ ಪರಶಿವನ, ಪರಬ್ರಹ್ಮನ, ಘನಲಿಂಗದ ಆರಾಧನೆಯಲ್ಲಿಯೇ ತೊಡಗಿರಬೇಕು ಇಲ್ಲದಿದ್ದರೆ ವ್ಯರ್ಥವಾಗುತ್ತದೆ. ಪರಸ್ತ್ರೀಯರ ಸಹವಾಸ. ಒಡನಾಟದೊಂದಿಗಿರುವ ಶರಣರು ಅಂತರಂಗದಲ್ಲಿ ಬಹಿರಂಗದಲ್ಲೂ ಶುದ್ಧಿಯಾಗಿದ್ದಾಗ ಮಾತ್ರವೇ ತಾವು ಕೈಗೊಂಡ ಆಚರಣೆಗಳಿಗೆ ನಿಜವಾದ ಅರ್ಥ ಲಭಿಸುತ್ತದೆ. ಇಂತಹ ಇನ್ನೂ ಅನೇಕ ವಚನಗಳಲ್ಲಿ ಮಾಚಯ್ಯನವರು ಬಹಿರಂಗದ ಆಚರಣೆ, ಅಂತರಂಗದ ಶುದ್ಧಿಯನ್ನು ವ್ಯಾಖ್ಯಾನಿಸಿದ್ದಾರೆ. ವ್ಯಕ್ತಿಯ ವೈಯಕ್ತಿಕ ಉದ್ಧಾರ, ಸಾಮಾಜಿಕ ಉದ್ಧಾರದ ಮೂಲ ನೆಲೆಯೆಂಬುದನ್ನು ಶರಣರು ಮನಗಂಡು ಈ ದಿಸೆಯಲ್ಲಿ ಅಂತರಂಗ – ಬಹಿರಂಗ ಶುದ್ಧಿಗಳೆರಡು ಅವಶ್ಯವಿದ್ದು ಅವುಗಳನ್ನು ಸಾಧಿಸುವುದರತ್ತ ವಚನಕಾರರು ಗಮನ ಹರಿಸಿದರು.

**7. ಸಾಮಾಜಿಕ ವಿಡಂಬನೆ :**

ಮಾನವ ಸಮಾಜ ಜೀವಿ, ಸಮಾಜದ ಕಷ್ಟ, ಸುಖಗಳಲ್ಲಿ ಮಾನವನು ತೊಡಗಿಸಿಕೊಂಡು ಜನರನ್ನು ಮೆಚ್ಚಿಸಿ ಬಾಳುವುದು ಬಲು ಕಷ್ಟಸಾಧ್ಯ. ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ! ಎಂದು ಬಸವಣ್ಣನವರು ತಿಳಿಸುತ್ತಾರೆ 'ಲೋಕದ ಪರಿವರ್ತನೆಗಿಂತ ಮುಂಚೆ ಸ್ವಯಂ ಜೀವನದಲ್ಲಿ ವ್ಯಕ್ತಿಯಾದವನು ತನ್ನನ್ನೂ ತಾನು ತಿದ್ದಿ ನಡೆಯಬೇಕು, ಪ್ರತಿಯೊಬ್ಬರ ವೈಯಕ್ತಿಕ ಬದಲಾವಣೆಯಿಂದ ಆತ್ಮವಿಮರ್ಶೆ – ಆತ್ಮೋದ್ಧಾರಗಳಿಂದ ಸಮಾಜದ ಉನ್ನತಿ ಸಾಧ್ಯವೆಂದು ಮಾಚಯ್ಯನಂತಹ ವಚನಕಾರರು ತಮ್ಮ ವಚನಗಳಲ್ಲಿ ಕಂಡುಕೊಂಡರು. 'ಗಡಿಗೆ ಬಾಯಿ ಮುಚ್ಚಬಹುದು ಆದರೆ ಜನರ ಬಾಯಿ ಮುಚ್ಚಲಾಗದು.

ಸಮಾಜದ ಜನರನ್ನು ಅವರಷ್ಟಕ್ಕೆ ಬಿಟ್ಟು ತಾನಿರುವಂತೆ ತಾನಿರಬೇಕು. ಸದಾಚಾರ ನಡೆಯಂತೆ ನುಡಿ – ನುಡಿಯಂತೆ ನಡೆ ಶರಣರಿಗಿರಬೇಕು ಸಮಾಜದಲ್ಲಿ ಕಾವಿ ತೊಟ್ಟು ಗುರುಗಳಂತೆ, ಜ್ಞಾನಿಗಳಂತೆ, ಶರಣರಂತೆ ನಟಿಸುವವರಿಗೆ, ಋಷಿಗಳಿಗೆ, ವೇಷ ತೊಟ್ಟ ಢಾಂಬಿಕರಿಗೆ ಕಟು ನುಡಿಗಳಲ್ಲಿ ಚಾಟಿಯನ್ನು ಬೀಸುತ್ತಾರೆ ಮಡಿವಾಳ ಮಾಚಯ್ಯನವರು. ವಿಷಯಾಸಕ್ತಗಳಿಗೆ ಬಲಿಯಾಗಿ, ತನ್ನನ್ನು ತಾನು ಅರ್ಥೈಸಿಕೊಳ್ಳದೆಯೇ, ಒಳಿತು –ಕೆಡುಕುಗಳ ವಿವೇಚನೆಗೈಯ್ಯದೆ, ಚಿನ್ನದ ಮೇಲಿನ ವ್ಯಾಮೋಹವನ್ನು ಕಳೆದುಕೊಳ್ಳದೆ ನಾವೇ ಹರ, ಗುರು, ಚರ ಷಟ್‌ಸ್ಥಲದ ವಿರಕ್ತರೆಂದು ಚೆನ್ನಾಗಿ ನುಡಿದುಕೊಂಡು, ಕಾವಿಯ ಬಟ್ಟೆಯ ತೊಟ್ಟು, ಕಾಷಾಯಾಂಬರವನ್ನು ಹೊದ್ದುಕೊಂಡು ಕೈಯಲ್ಲಿ ಶಂಖ, ಗಿಳಿಲು ದಂಡಾಗ್ರವ ಹಿಡಿದು ಭಿಕ್ಷೆಗಾಗಿ ನಾನಾ ದೇಶವನ್ನು ತಿರುಗುವ, ಕಾಂಚನಕ್ಕಾಗಿ ಕೈಯೊಡ್ಡುವ ಕಪಟ ವಿರಕ್ತರು, ಗುರುಗಳು, ಚರಮೂರ್ತಿಗಳೇ ಮೊದಲಾದ ಸಮಾಜ ವಂಚಕ ಕಾವಿಕಾಷಾಯಾಂಬರಧಾರಿಗಳು, ಮೂರು ಜಡೆ ಗಡ್ಡ ಬಿಟ್ಟ ವೇಷಧಾರಿಗಳು, ಕೆರೆಕಟ್ಟೆ ಮಠಮಾನ್ಯಗಳನ್ನು ಕಟ್ಟುವುದಾಗಿ ಹೇಳಿ ವಂಚನೆಯ ಮಂಚವೇರುವ ಸಮಾಜ ಸುಧಾರಕರು, ವ್ಯಾಪಾರದ ನೆಪದಲ್ಲಿ ಬಡವರ ಶೋಷಣೆ ಮಾಡುವವವರು, ಕೊಟ್ಟರೆ ಹೊಗಳಿ ಕೊಡದಿದ್ದರೆ ಬೈಯ್ಯುವ ದುರ್ಗುಣ ದುರಾಚಾರಿಗಳನ್ನು ಮುಖ ಮುಲಾಜಿಲ್ಲದೆ ಛೇಡಿಸುತ್ತಾರೆ. ಇವರೆಲ್ಲರ ಮೇಲೂ ವಚನಗಳಲ್ಲಿ ಹರಿಹಾಯ್ದಿದ್ದಾರೆ. ನೈಷ್ಠುರ್ಯಕ್ಕೆ ಹೆಸರಾದ ಮಾಚಯ್ಯನವರು ಅನ್ಯಾಯ – ಅಧರ್ಮಗಳನ್ನು ಪ್ರಬಲವಾಗಿ ವಿರೋಧಿಸಿದವರು. ಪುರೋಹಿತಶಾಹಿ ಢಾಂಬಿಕತನದ ವಿರುದ್ಧ ಬಂಡೆದ್ದ ಬಂಡಾಯಗಾರ, ಧರ್ಮ ದ್ರೋಹಿಗಳು, ವಂಚಕರು, ಸಮಾಜ ಘಾತುಕರೇ ಮೊದಲಾದ ಪೀಡೆಗಳ ಮೇಲೆ ಗುಡುಗಾಗಿ ಗುಡುಗಿ ಸಿಡಿಲಾಗಿ ಎರಗುತ್ತಾರೆ ಇದಕ್ಕೆ ನಿರ್ದಶನವೆಂಬಂತೆ ಮುಂದಿನ ವಚನವನ್ನು ಗಮನಿಸಬಹುದು.

> "ಅಯ್ಯಾ, ತನ್ನ ತಾನರಿಯದೆ
> ತನ್ನ ಇಷ್ಟಲಿಂಗದ ಹೊಲಬು ತಿಳಿಯದೆ
> ಕಾಮವ ತೊರೆಯದೆ ಹೇಮವ ಜರೆಯದೆ,
> ನಾವು ಹರ ಗುರು ಚರ ಷಟ್‌ಸ್ಥಲದ ವಿರಕ್ತರೆಂದು
> ಚೆನ್ನಾಗಿ ನುಡಿದುಕೊಂಡು,
> ಕಾವಿ ಕಾಷಾಯಾಂಬರವ ಹೊದ್ದು,
> ಶಂಕ ಗಿಳಿಲು ದಂಡಾಗ್ರವ ಹೊತ್ತು,
> ಕೂಳಿಗಾಗಿ ನಾನಾದೇಶವ ತಿರುಗಿ,
> ಕಾಂಚನಕ್ಕೆ ಕೈಯೊಡ್ಡುವ ಪಂಚಮಹಾಪಾತಕರನು
> ಕಾಗೆಯ ಗರ್ಭದಲ್ಲಿ ಹುಟ್ಟಿಸಿ ಕಾ ಕಾ ಎಂದು ಕೂಗಿಸುತಿರ್ಪನು
> ಕಲಿದೇವರ ದೇವ"[27]

ಇಂತಹ ಢಾಂಬಿಕರನ್ನು ಕಾಗೆಯ ಗರ್ಭದಲ್ಲಿ ಜನಿಸುವಂತೆ ಮಾಡುತ್ತಾನೆ ಕಲಿದೇವ ದೇವ ಎಂದೇಳುತ್ತಲೇ. ದುರಾಚಾರಿಗಳಿಗೆ ಇಪ್ಪತ್ತೆಂಟು ಕೋಟಿ ಯುಗಗಳ ಪರಿಯಂತ ನರಕದ ಕೊಂಡದಲ್ಲಿಕ್ಕುತ್ತಾನೆ. ನಮ್ಮ ಕಲಿದೇವರ ದೇವ ಎಂದು ಎಚ್ಚರಿಸುತ್ತಾನೆ. ಸಮಾಜದಲ್ಲಿ ನಿಂದಕರನ್ನು ಮೆಚ್ಚಿಸಲು ಸಾಧ್ಯವಿಲ್ಲವೆನ್ನುವುದನ್ನು ಮಾಚಯ್ಯನವರ ಮತ್ತೊಂದು ವಚನದಲ್ಲಿ ಗಮನಿಸಬಹುದು. ಈ ಜಗತ್ತು ವಿಚಿತ್ರವಾಗಿದೆ. ಇಲ್ಲಿ ಹೇಗಿರಬೇಕು, ಯಾವ ರೀತಿಯಿಂದ ಮುಂದುವರಿಯಬೇಕು ಎಂಬುದೇ ತಿಳಿಯದಂತಾಗಿದೆ. ಊಟ ಮಾಡಿದರೆ ಭೂತ ಎನ್ನುವರು, ಊಟ ಮಾಡದಿದ್ದರೆ ಚಕೋರ ಪಕ್ಷಿಯಂತೆ ಎನ್ನುವರು, ಊರಲ್ಲಿದ್ದರೆ ಸಂಸಾರಿ, ಊರಲ್ಲಿರದೇ ಅಡವಿ ಸೇರಿದರೆ ಮಂಗ ಎನ್ನುವರು, ಮಾತನಾಡಿದವರನ್ನು ಕೆಟ್ಟ ಕೆಲಸ ಮಾಡುವವರು ಎಂದರೆ ಮಾತನಾಡದವರನ್ನು ರಹಸ್ಯಕರ್ಮಕಾರ ಎಂದೆನ್ನುವರು, ಮಲಗಿರದಿದ್ದರೆ ಕಳ್ಳನಿರಬಹುದೆಂದರೆ, ಮಲಗಿದವರನ್ನು ಜಡದೇಹಿ ಎಂದು ನಿಂದಿಸುತ್ತಾರೆ ಸಮಾಜದಲ್ಲಿನ ಜನ. ಈ ವಚನದಲ್ಲಿ ಮಾಚಯ್ಯನವರು ಎಂಟು ವಿಧದ ನಿಂದೆಗಳನ್ನು ತಿಳಿಸಿ. ಜನ ಮೆಚ್ಚುವಂತೆ ಬದುಕುವುದು ಅಸಾಧ್ಯವೆಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಲೋಕದ ಡೊಂಕ ತಿದ್ದುವುದು ನಮ್ಮಿಂದಾಗದು, ನಮ್ಮನ್ನು ನಾವೇ ತಿದ್ದಿಕೊಂಡು ನಡೆಯಬೇಕು, ಸಮಾಜದಲ್ಲಿ ಬದುಕುವ ವ್ಯಕ್ತಿಗೆ ಸಮಾಜದ ಕಿರುಕುಳ ತಪ್ಪಿದ್ದಲ್ಲ. ಆದರೂ ಸಮಾಜ ಬಿಟ್ಟು ಬಾಳುವಂತಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತ 'ಇಂತೀ ವಸುಧೆಯೊಳು ಎಂಟು ವಿಧವ ಕಳೆಯಲಳವಲ್ಲ' ಎಂದು ಸ್ಪಷ್ಟನಿರ್ಧಾರವನ್ನು ಮಾಚಯ್ಯನವರು ತಿಳಿಸಿದ್ದಾರೆ.

> "ಉಂಡರೆ ಭೂತನೆಂಬರು, ಉಣದಿರ್ದಿರೆ ಚಕೋರಿ ಎಂಬರು
> ಊರೊಳಗಿರ್ದಡೆ ಸಂಸಾರಿಯೆಂಬರು, ಅಡವಿಯೊಳಗಿರ್ದಡೆ ಮರ್ಕಟನೆಂಬರು
> ಮಾತನಾಡಿದರೆ ಪಾಪಕರ್ಮಿ ಎಂಬರು,
> ಮಾತನಾಡದಿರ್ದಡೆ ಮುಸುಕರ್ಮಿ ಎಂಬರು
> ಮಲಗದಿರ್ದಡೆ ಚೋರನೆಂಬರು, ಮಲಗಿರ್ದಡೆ ಜಡದೇಹಿಯೆಂಬರು,
> ಇಂತೀ ವಸುಧೆಯೊಳಗೆ ಎಂಟು ವಿಧ ಕಳೆಯಲು ವಶವಲ್ಲ ಕಾಣಾ
> ಕಲಿದೇವರ ದೇವ" [28]

ಸಮಾಜದಲ್ಲಿನ ಡಂಭಾಚಾರ, ಸೋಗು, ಇತ್ಯಾದಿಗಳನ್ನು ಮಾಚಯ್ಯನವರು ಹೇಳುವ ಪರಿ, ಹಾಗೂ ಅಂಬಿಗರ ಚೌಡಯ್ಯನವರು ವ್ಯಕ್ತಪಡಿಸುವ ವಸ್ತುವಿನಲ್ಲಿ ಸಾಮ್ಯತೆ ಇದ್ದರೂ ಅಭಿವ್ಯಕ್ತಿಯ ಕ್ರಮದಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ಸಮಾಜದಲ್ಲಿ ನೂರೆಂಟು ವಕ್ರತೆಗಳಿದ್ದು ಅವುಗಳನ್ನು ತಿದ್ದಬೇಕಾದಂತಹ ಅನಿವಾರ್ಯತೆಯನ್ನು ಗುರುತಿಸುವುದು, ನೇರ್ಪಡಿಸುವುದನ್ನು ಕಾರ್ಯಗತಗೊಳಿಸಬೇಕಾಗಿದೆ. ಸಮಾಜದಲ್ಲಿ ಮಡುಗಟ್ಟಿ ನಿಂತಿದ್ದ ಮೂಢನಂಬಿಕೆ, ಕ್ಷುದ್ರದೇವೋಪಾಸನೆಗಳು ಜನ ಸಾಮಾನ್ಯರ ಮೇಲೆ ಅಗಾಧ ಪರಿಣಾಮ ಬೀರಿದ್ದವು. ಅವುಗಳಿಂದ ಜನ ಸಾಮಾನ್ಯರನ್ನು ಹೊರತರುವ ಕೆಲಸವನ್ನು ಮಾಚಯ್ಯನವಂತಹವರು ತಮ್ಮ ವಚನಗಳ ಮೂಲಕ ಕೈಗೊಂಡರು.

**8. ಇತರ ವಚನಗಳು :**

ಮಡಿವಾಳ ಮಾಚಯ್ಯನವರ ವಚನಗಳನ್ನು ಅಭ್ಯಸಿಸುತ್ತಾ ಸಾಗುವಾಗ ಶರಣಧರ್ಮ ಪರಂಪರೆಯ, ವಚನ ಸಾಹಿತ್ಯದ ಪ್ರಮುಖ ನಿಲುವುಗಳಾದ 'ದಯವೇ ಧರ್ಮದ ಮೂಲವಯ್ಯಾ', ಪರಸ್ತ್ರೀಯರ ಬಗೆಗಿನ ವ್ಯಾಮೋಹರಹಿತ ಭಾವನೆ, ಅಹಿಂಸೆಯ ಪ್ರತಿಪಾದನೆ, ನಡೆನುಡಿಗಳಲ್ಲಿನ ಸಾಮ್ಯತೆ, ವ್ಯಕ್ತಿಗೌರವದ ಪ್ರತಿಪಾದನೆ, 'ಆಸೆಯ ದುಃಖಕ್ಕೆ ಮೂಲ'ವೆನ್ನುವ ಸತ್ಯ, ಶರಣರು ಅನುಸರಿಸಿದ ಬೇಕಾದ ಚಾರಿತ್ರ್ಯವನ್ನು ಮತ್ತು ನಡವಳಿಕೆಯ ಪಥ, ಮುಂತಾದ ಅಂಶಗಳನ್ನು ಗುರುತಿಸಿ ಅಧ್ಯಯನಕ್ಕೊಳಪಡಿಸಲು ಸಾಧ್ಯವಿದೆ. ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ. ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ, ಛಲಬೇಕು ಶರಣಂಗೆ ಪರದೈವನೊಲ್ಲೆನೆಂಬ' ಎನ್ನುವ ಬಸವಣ್ಣನವರಂತೆಯೇ ಮಡಿವಾಳ ಮಾಚಯ್ಯನವರು ದೇವರ ಸಾಕ್ಷಾತ್ಕಾರವಾಗ ಬೇಕಾದರೆ, ಧರ್ಮ ಮಾರ್ಗದಲ್ಲಿ ಶರಣರು ನಡೆಯಬೇಕು, ಭಕ್ತನಾದವನು ಧರ್ಮ ಮಾರ್ಗದಲ್ಲಿ ನಡೆಯಬೇಕೆಂದರೆ ಪ್ರಾಣಿ ಬಲಿಯಂತಹ ಕ್ಷುದ್ರ ಆಚರಣೆಯನ್ನು ಕೈಗೊಳ್ಳಬೇಕು. 'ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು' ಎನ್ನುವ ಸರ್ವಜ್ಞನ ಮಾತಿನಂತೆ ಜಗತ್ತಿನ ಇತರ ಜೀವಿಗಳಿಗೆ ನೋವಾಗದಂತೆ ಬದುಕಿ – ಬದುಕಲು ಬಿಡಿ ಎನ್ನುವ ಸತ್ಯ ಸಂದೇಶವನ್ನು ಮಾಚಯ್ಯನವರ ವಚನವು ಪ್ರತಿಪಾದಿಸುತ್ತದೆ. ಎಲ್ಲ ಪ್ರಾಣಿಗಳಲ್ಲಿ ದಯೆಯ, ಕಾರುಣ್ಯದ ಗುಣಗಳನ್ನು ತೋರಿಸಬೇಕಾದ ಅನಿವಾರ್ಯತೆಯನ್ನು ಬಸವಣ್ಣನವರು ತಮ್ಮ ವಚನ ಭಾಗದಲ್ಲಿ ತಿಳಿಸುತ್ತಾರೆ.

"ದಯವಿಲ್ಲದ ಧರ್ಮವದೇವುದಯ್ಯ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ!
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲ ಕಂಡಯ್ಯ" [23]

ಇದರಂತೆಯೇ, ಮಾಚಯ್ಯನವರು ಕೂಡ ಬಸವಣ್ಣನವರ ವಚನವನ್ನೇ ಹೋಲುವಂತಹ, ಬಸವಣ್ಣನವರ ವಿಚಾರಗಳನ್ನೇ ಪ್ರತಿಪಾದಿಸುವಂತಹ, ಬಸವಣ್ಣನವರ ಮತ್ತು ವಚನ ಸಾಹಿತ್ಯದ ಪರಿಕಲ್ಪನೆಗೆ ಮತ್ತಷ್ಟು ಪುಷ್ಟಿಕೊಡುವಂತಹ ವಚನವನ್ನು ರಚಿಸಿದ್ದಾರೆ. ವಿಶ್ವ ಬಾಂಧವ್ಯದ ಮೇಲೆ ಕಟ್ಟಿದ ಯಾವ ಧರ್ಮದಲ್ಲೇ ಆಗಲಿ, ಆಯಾ ಧರ್ಮ ಪ್ರವರ್ತಕರು, ಪುರಾತನರು 'ದಯೆ'ಗೆ ಪ್ರಥಮ ಸ್ಥಾನವನ್ನು ಕೊಟ್ಟು ಅದರತ್ತಲೇ ಎಲ್ಲರ ಅವಧಾರಣೆಯಿರಲೆಂದು ಒತ್ತಿ ಒತ್ತಿ ಮತ್ತೆ ಮತ್ತೆ ಹೇಳಿರುವುದು. 'ದಯೆ'ಯೆ ಎಲ್ಲ ಧರ್ಮಗಳ ಮೂಲ ಆಶಯವಾಗಬೇಕು. ದಯೆಯ ಮೂಲಾಂಶವಿಲ್ಲದೆ ಯಾವ ಧರ್ಮವು ತನ್ನ ಮೂಲೋದ್ದೇಶವಾದ ಸಮಷ್ಟಿ ಹಿತವನ್ನು ಕಿಂಚಿತ್ತೂ ಸಾಧಿಸದೇ ಅಸೂಯೆ, ಅಹಿತ ಸ್ಪರ್ಧೆ, ವೈರ, ವಿಧ್ವಂಸನಗಳಿಗೆ ಅವಕಾಶವಿತ್ತರೆ ಅಂತಹ ಧರ್ಮ ನಾಶವಾಗುತ್ತದೆ.

"ಎಲ್ಲೆಲ್ಲಿಯು ಪ್ರಾಣಿಯ ಕೊಲ್ಲದಿಹುದೆ ಧರ್ಮ
ಒಲ್ಲದಿಪ್ಪುದೇ ತಪ
ಪರವಧುವಿನ ಆಸೆ, ತನ್ನ ಮನದಲ್ಲಿ ಇಲ್ಲದಿರ್ದಡೆ
ದೇವ ತಾನಲ್ಲಿಯೇ ಎಂದ, ದೇವರ ದೇವ"! [30]

ಹೀಗೆ ಬಸವಣ್ಣನವರ ವಚನದ ಮುಂದುವರೆದ ಭಾಗದಂತೆಯೂ, ಧರ್ಮದೊಂದಿಗೆ ಮನುಷ್ಯನ ನಡವಳಿಕೆಯನ್ನು ದೇವರನ್ನು ಒಲಿಸುವ ಮಾರ್ಗವನ್ನು ಮಡಿವಾಳ ಮಾಚಯ್ಯನವರು ನಮಗೆ ತೆರೆದು ತೋರಿಸುತ್ತಾರೆ. ಸಮಾಜ ಜೀವಿಯೆನಿಸಿಕೊಂಡ ಮನುಷ್ಯನು ಕೂಡಿ ಬಾಳುವ ಹಂಚಿ ತಿನ್ನುವ ಸಹಜ ಪ್ರವೃತ್ತಿಯನ್ನು ಕಳೆದುಕೊಂಡು ಕಾಗೆ– ಕೋಳಿಗಳಿಗಿಂತಲೂ ಕೀಳಾಗಿ ವರ್ತಿಸುತ್ತಾನೆ. ಎಲ್ಲಾವರೂ ಚೆಲ್ಲಿದ ಅಗುಳನ್ನು ಕಂಡರೆ ಕಾಗೆ ತನ್ನ ಬಳಗವನ್ನೆಲ್ಲಾ ಕಾ! ಕಾ! ಎಂದು ಕರೆದು ಜೊತೆಗೂಡಿ ತಿನ್ನುವುದು, ಕೋಳಿಯಾದರೂ ಅಷ್ಟೆ; ಕುಟುಕು ಸಿಕ್ಕಿದರೆ ತನ್ನ ಮರಿ ಮಂದಿಯನ್ನೆಲ್ಲಾ ಕರೆದು ಒಡಗೂಡಿ ತಿನ್ನುವುದು, ದೈವ ಭಕ್ತನಾದವನಿಗೆ ಇತರೆಲ್ಲರೂ ದೈವಭಕ್ತರೆಲ್ಲ ಬಂಧುಬಳಗವಲ್ಲವೇ? ಅವರ ಕುಲ ಮತ್ತು ದೈವ ಭಕ್ತನ ಕುಲ ಒಂದೇಯಲ್ಲವೇ? ಎಲ್ಲರೂ ಶಿವನ ಕುಲವಲ್ಲವೇ? ನೀನು ಗಳಿಸಿರುವುದನ್ನು ನಿನ್ನ ಸಹಜೀವಿಗಳೊಡನೆ ಹಂಚಿ ತಿನ್ನುವ ಗುಣವಿರಿಸಿಕೊಂಡು ಬದುಕಬೇಕೆಂದು ಬಸವಣ್ಣನವರು ತಮ್ಮ "ಕಾಗೆಯೊಂದಗುಳ ಕಂಡರೆ, ಕರೆಯದೇ ತನ್ನ ಬಳಗವೆಲ್ಲವ" ಎನ್ನುವ ವಚನದಲ್ಲಿ ಸೂಚಿಸಿರುವಂತೆಯೇ ಮಡಿವಾಳ ಮಾಚಯ್ಯನವರು 'ಮನುಷ್ಯ ಜನ್ಮದಲ್ಲಿ ಜನಿಸಿದ ಬಳಿಕ ಶಿವಜ್ಞಾನವನ್ನು ಅರಿಯದಿದ್ದರೆ ಕಾಗೆ ಕೋಳಿಗಳಿಗಿಂತ ಬಲು ಕೀಳೆಂದು' ವಿವರಿಸುತ್ತಾರೆ. ಶ್ರೇಷ್ಠವಾದ ಉತ್ತಮವಾದ ಹಿರಿದಾದ ನರ ಜನ್ಮದಲ್ಲಿ ಜನಿಸಿ, ತನ್ನನ್ನು ತಾನು ಅರಿಯದಿದ್ದರೆ, ಜಗತ್ತನ್ನು ಸೃಷ್ಟಿಸಿದ ಸೃಷ್ಟಿಕರ್ತನ, ಶಿವನ ಬಗ್ಗೆ ಶ್ರೇಷ್ಠವಾದ ಜ್ಞಾನಸಂಪಾದನೆ ಮಾಡದಿದ್ದರೆ ಶಿವನನ್ನು ಈ ಮಾನವ ಜನ್ಮದಲ್ಲಿ ಅರಿಯದಿದ್ದರೆ ಶ್ರೇಷ್ಠವಾದ ನರಜನ್ಮ ಹೊತ್ತು ಬಂದಿದ್ದರ ಫಲವೇನು? ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವರು.

"ವಾಯುಗುಣವ ಸರ್ಪಬಲ್ಲುದು
ಮಧುರ ಗುಣವ ಇರುಹೆ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು
ವೇಳೆ ಗುಣವ ಕೋಳಿ ಬಲ್ಲುದು
ಇದುಕಾರಣ, ಮನುಷ್ಯ ಜನ್ಮದಲ್ಲಿ ಬಂದು
ಶಿವಜ್ಞಾನವನರಿಯದಿದ್ದರೆ,
ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರ ದೇವಾ" [31]

ಈ ವಚನ ಭಾಗದಲ್ಲಿ ಬೋಧನಾತ್ಮಕ ನಿಲುವಿನ ಪ್ರತಿಪಾದನೆಯನ್ನು ಕಾಣಬಹುದು. ದೇವರ ಮುಂದೆ ತನ್ನಾಟವೇನು ನಡೆಯದು, ಭಗವಂತನ ಅನುಗ್ರಹವಿಲ್ಲದೆ ಹುಲ್ಲುಕಡ್ಡಿಯೂ ಕಿಂಚಿತ್ತೂ ಚಲಿಸದೆನ್ನುವ ವಿಚಾರವನ್ನು ಪ್ರತಿಪಾದಿಸುತ್ತಾ, ಸಿಂಹದ ಮುಂದೆ ಜಿಂಕೆಯ ಜಿಗಿದಾಟವೇ? ಪ್ರಳಯಾಗ್ನಿಯ ಮುಂದೆ ಪತಂಗದಾಟವೇ? ಸೂರ್ಯನ ಮುಂದೆ ಕೀಟದಾಟವೇ? ನಿಮ್ಮ ಮುಂದೆ ಎನ್ನಾಟವೇ? ಕಲಿದೇವರದೇವಾ' ಎಂದು ವಿನಯವಂತಿಕೆಯನ್ನು ಪ್ರದರ್ಶಿಸುತ್ತಾರೆ. ಜಗದ ಜನರು ಭಕ್ತಿಯನ್ನು ಯಾವ ರೀತಿಯಲ್ಲಿ ವ್ಯಕ್ತಪಡಿಸಿ ವ್ಯರ್ಥವಾಗುತ್ತದೆನ್ನುವ ಅಂಶವನ್ನು ತಮ್ಮ ಮತ್ತೊಂದು ವಚನದಲ್ಲಿ ಮಾಚಯ್ಯನವರು 'ಅರಸನ ಭಕ್ತಿಯು ಅಹಂಕಾರದಲ್ಲಿ ನಾಶವಾಗುವುದು, ಬ್ರಾಹ್ಮಣನ ಭಕ್ತಿಯು ಮುಟ್ಟು ಮಡಿಗಳಲ್ಲಿಯೇ ಕುಂದುವುದು, ಶೀಲವಂತನ ಭಕ್ತಿಯು ಸಂಸಾರ ಕಾರ್ಯಗಳಲ್ಲಿ ಹೋಗಿತ್ತು. ವ್ಯಾಪಾರಿಯ ಭಕ್ತಿಯು ಮೋಸದ ವ್ಯಾಪಾರದಲ್ಲಿ ನಾಶವಾಗುವುದೆಂದು' ವಿವರಿಸುತ್ತಾರೆ.

ಮಡಿವಾಳ ಮಾಚಯ್ಯನವರ ವಚನಗಳನ್ನು ಅಭ್ಯಸಿಸಿದಂತೆಲ್ಲಾ ಕಾವ್ಯಾತ್ಮಕ ಗುಣಗಳು, ಮಡಿವಾಳ ಮಾಚಯ್ಯನವರಿಗಿದ್ದ ಸಂಸ್ಕೃತದ ಜ್ಞಾನವ್ಯಾಪ್ತಿ, ಸಮಾಜವನ್ನು ಚಿಕಿತ್ಸಕ ಕಣ್ಣುಗಳಿಂದ ನೋಡುವ ದೃಷ್ಟಿಕೋನ, ವಚನಗಳಲ್ಲಿನ ಓಜೋಗುಣ, ಸ್ಫುಟತೆ ಮತ್ತು ಭಾವತೀವ್ರತೆಯು ಸ್ಪಷ್ಟವಾಗುತ್ತವೆ. ವಚನಗಳಲ್ಲಿ ಉಪಮೆಗಳನ್ನು, ಶಬ್ದ ಚಿತ್ರಗಳನ್ನು ಮತ್ತು ಗಾದೆ, ದೈನಂದಿನ ನಾಣ್ಣುಡಿಗಳನ್ನು ಕಾಣಬಹುದು. ಸಮಾಜವನ್ನು ತಮ್ಮ ಮೊನಚಾದ ಮಾತುಗಳಿಂದ ಜಾಗೃತಗೊಳಿಸುವತ್ತ ಮಾಚಯ್ಯನವರು ಪ್ರಾಣಿ – ಪಕ್ಷಿರೂಪಕಗಳ ಮೂಲಕ ವ್ಯಕ್ತಪಡಿಸುತ್ತಾರೆ. ಹಲವು ವಚನಗಳಲ್ಲಿ ನುಡಿಗಟ್ಟುಗಳು ಸೂಕ್ತಿಗಳ ಬಳಕೆಯು ವಿಶೇಷವಾಗಿವೆ.

"ಹಣ್ಣಿಲ್ಲದ ರುಚಿಯನರಸುವಂತೆ"

"ಹುಸಿ ಇದ್ದಲ್ಲಿ ಪರದೊರಕೊಂಬುದಯ್ಯ"

"ಹುಚ್ಚಗೊಂಡ ನಾಯಿಬಲ್ಲುದೆ? ತನ್ನ ಸಾಕಿದೊಡೆಯನ"

"ಬಯಲ ರಂಜಕರೆಲ್ಲ ಭಕ್ತರಪ್ಪರೆ ಅಯ್ಯಾ?"

"ಅಂಧಕನ ಕೈಯಲ್ಲಿ ದೀವಿಗೆ ಇದ್ದರೇನು ಪಥವ ನೋಡಿ ನಡೆಯಬಲ್ಲನೇ?'

"ಕಸಗೊಂಡ ಭೂಮಿಯಲಿ ಸಸಿ ಪಲ್ಲವಿಸುವುದೇನಯ್ಯ"

"ಮುಗ್ಗಿದ ತುರಗದ ಕಾಲ ಕತ್ತರಿಸಿದವರುಂಟೇ?"

"ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹೋಗುವಂತೆ"

"ಕಿಚ್ಚಲು ಕಚ್ಚಿದ ಉಣ್ಣೆ ಬಲ್ಲುದೇ ಕ್ಷೀರದ ರುಚಿಯನು"

"ಕಚ್ಚುವ ತಿಗಣೆಗಾಗಿ ಮನೆಯ ಸುಟ್ಟವರುಂಟೆ"

"ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ"

"ಬಚ್ಚಲೊಳಗಣ ಜಾಲಹುಳು ಬಲ್ಲುದೇ ನಿಚ್ಚಳ ನೀರಸುಖವ"

"ಹುಟ್ಟಿದ ಬೀಜವಿದ್ದರೇನಯ್ಯ ಧರೆಯೊಳಗೆ"

"ಗಂಡನೆಂಜಲಿಗೆ ಹೇಸುವಳು ಮಿಂಡನೆಂಜಲ ತಿಂಬಳ ತೆರನಂತೆ"

"ಒಡೆಯನ ಕಂಡನಾಯಿ ಬಾಲವ ಬಡಿದುಕೊಂಬಂತೆ"

"ತೊತ್ತು ಶೃಂಗಾರವ ಮಾಡಿದರೇನು, ಪುರುಷನುಳ್ಳ ಮುತ್ತೈದೆಗೆ ಸರಿಯಾಗಬಲ್ಲಳೆ"

"ಗರಿಯ ಕಟ್ಟಿದ ಕೋಲು ಗುರಿಯತಾಗಬಲ್ಲುದೆ?"

"ಪಕ್ಕಾಮುರಿದ ಕೋಳಿಯಂತೆ ಬೆಕ್ಕಿನ ಬಾಧೆಗೆ ಸಿಕ್ಕಬೇಡ"

"ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು"

"ಗರ್ಭದ ಭಾರ ಜನನಿ ಅರಿವಂತೆ ಜನಕನರಿವನೆ"

"ನೊಣವಿಂಗೆ ಪಕ್ಕ ಹುಟ್ಟಿದರೆ ಶರಭನಾಗಬಲ್ಲುದೆ"

"ಕಮಲಕೆರಗುವ ಭ್ರಮರ ಕನಕದ ತನುವಿಂಗೆರಗುವುದೇ?"

"ಆಶಾಪಾಶವ ಬಿಟ್ಟಡೇನಯ್ಯ? ರೋಷಪಾಶವ ಬಿಡದನ್ನಕ್ಕರ?"

"ಅರಿದು ಆಚರಿಸಬಲ್ಲಾತನೆ ಅಚ್ಚಶರಣ"

"ಸಂಸಾರದ ಸಾರಾಯದ ತನಿರಸವ ಹಿಂಡಿ ಹಿಳಿದಾಡಿದರಯ್ಯ"

"ಮಾಡುವ ಭಕ್ತರಿಗೆ ಒಲಿದ ದೇವಂಗೆ ಭೇದ ಉಂಟೆ ಅಯ್ಯಾ?"

"ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬೇಕೆ?"

"ಮಧುರಕ್ಕೆ ಮಧುರ ಒದಗಲಾಗಿ ಸವಿಗೆ ಕೊರತೆಯುಂಟೆ?"

"ಕುಲವ ನೋಡಿ ಕನ್ನೆಯ ಕೊಳ್ವುದು, ಕುಲವ ನೋಡಿ ಕನ್ನೆಯ ಕೊಂಬುದು"

"ಎತ್ತಿನ ಮರೆಯ ಬಿತ್ತುಗಾರರಂತೆ"

"ಅರಳು ಗಂಗಳವರಿಗೆ ಹರುಳು ಗಂಗಳವರು ಸೇರಿಸದಂತೆ"

"ಕಾಂಚನಕ್ಕೆ ಕಂಪು ಉಂಟಾದಂತೆ, ಸೋಗೆಗೆ ಫಲವು ಫಲಿಸಿದಂತೆ"

"ಅಟ್ಟುಣ್ಣದ ಮಡಕೆಯಿದ್ದರೇನಯ್ಯ ಮನೆಯೊಳಗೆ?"

"ಗ್ರಾಮದ ಶುನಕ ಗಂಗೆಯ ಮೀಸಾಡಹೋಗಿ ಶುದ್ಧವಾಗಬಲ್ಲುದೆ?"

"ಸಿಕ್ಷ ನೋಡುವ ಗಿಣಿ ಬಲ್ಲುದೆ ತನಗೆ ಬಹ ಬೆಕ್ಕಿನ ಬಾಧೆಯ"

“ಹೇಳಿದ ಬೋಧೆ ವಿಧವೆಯ ಯೌವನದಂತಾಗಬಾರದು”

“ಘೂಕರಾತ್ರಿಯೆಂದಡೆ ಲೋಕದೀಪವ ಹೊತ್ತಿಸುವುದೇ?”

ಎಲ್ಲ ಶರಣರಿಗೂ ತಂದೆಯಂತೆ ಮಾರ್ಗದರ್ಶನ ತೋರಿ, ‘ಮಡಿವಾಳ ಮಾಚಿತಂದೆ’ ಎಂದೆನಿಸಿಕೊಂಡ ಮಡಿವಾಳ ಮಾಚಯ್ಯನವರ ಜೀವನಾನುಭವದ ಅಮೃತದ ಬಿಂದುಗಳಾಗಿ ಸೂಕ್ತಿಗಳು, ನಾಣ್ಣುಡಿಗಳು, ಉಪಮೆಗಳು ವಚನಗಳಲ್ಲಿ ಬಳಕೆಗೊಂಡು ಕಾವ್ಯದ ಮೆರುಗನ್ನು ಕೊಟ್ಟಿವೆ.

ಒಟ್ಟಿನಲ್ಲಿ ಮಡಿವಾಳ ಮಾಚಯ್ಯನವರು ತಮ್ಮ ವಚನಗಳಲ್ಲಿ ಇಡೀ ಸಮಾಜವನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವ ನಿಲುವು, ಶರಣ ಪರಂಪರೆಯಲ್ಲಿ ಪ್ರತಿಪಾದಿತವಾಗಿರುವ ಪರಿಕಲ್ಪನೆಗಳು, ಕಾಯಕ, ದಾಸೋಹ, ಗುಡಿಸಂಸ್ಕೃತಿಯ ನಿರಾಕರಣೆ, ಸ್ಥಾವರ – ಜಂಗಮತ್ವ, ತ್ರಿವಿಧ ದಾಸೋಹದ ಚೌಕಟ್ಟು, ಭಕ್ತಿಯ ನೆಲೆ, ಲಿಂಗತತ್ವ, ಅನುಭಾವದ ಅಂತರಂಗ, ನಿಜಧರ್ಮದ ತಿರುಳು, ವಾಸ್ತವಿಕ ಜೀವನ ದೃಷ್ಟಿ, ಅಂತರಂಗದ ಅರಿವೇ ಗುರು, ಅಂತರಂಗಕ್ಕೆ ಸಂಸ್ಕಾರ, ಅನುಭಾವದ ಅಗ್ಗಳಿಕೆ, ಮನಸ್ಸಿನ ಪರಿಶುದ್ಧತೆ, ನ್ಯಾಯ – ನಿಷ್ಠುರತೆ, ಏಕದೇವೋಪಾಸನೆಯ ನಿಜಸ್ವರೂಪ, ಗುರು – ಲಿಂಗ – ಜಂಗಮ ಒಂದೇ ಎನ್ನುವ ನಿಲುವು. ವಚನವೆಂಬುದು ಓದಿ ಮಾತಾಗಬಾರದು ಕೃತಿರೂಪವಾಗಬೇಕು, ಮನಸ್ಸಿನ ಪರಿಶುದ್ಧತೆಯಿಂದ ಮನುಷ್ಯತ್ವ ಮತ್ತು ದೈವತ್ವ, ಬೂಟಾಟಿಕೆ, ಡಾಂಭಿಕ ಭಕ್ತಿ, ವೇದವನೋದಿ ವ್ಯಾಧಿ ಪರಿಹಾರವಾಗದೆನ್ನುವ ಪ್ರತಿಪಾದನೆ ಇನ್ನೂ ಹಲವಾರು ವಿಚಾರಗಳನ್ನು ತಮ್ಮ ವಚನ ವ್ಯಾಪ್ತಿಯಲ್ಲಿ ವಿವರಿಸಿದ್ದಾರೆ. ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಪರಂಪರೆಯ ಸಂಸ್ಕೃತಿಯ ಭಾಗವಾಗಿ ಮಾಚಯ್ಯನವರ ವಚನಗಳು ಸಮಾಜದ ಮೇಲೆ ಬೆಳಕು ಚೆಲ್ಲುತ್ತಾ, ಸಮಾಜವನ್ನು ಅಭಿವೃದ್ಧಿಯ ಪಥದತ್ತ ಕೊಂಡೊಯ್ಯುವುದರಲ್ಲಿ ಕ್ರಿಯಾಶೀಲವಾಗುತ್ತವೆ.

ಪ್ರಸ್ತುತ ಸಾಮಾಜಿಕ ಸ್ಥಿತಿ–ಗತಿಗಳಲ್ಲಿ ಬಸವಣ್ಣನವರಾದಿಯಾಗಿ, ಮಾಚಯ್ಯನವರ ವಚನಗಳನ್ನು ಅಧ್ಯಯನಿಸುವಾಗ ಸಾಮಾಜಿಕ ಸಮಸ್ಯೆಗಳಿಗೆ ವಚನಗಳೇ ದಿವ್ಯೌಷಧಿಯಾಗಿ ಗೋಚರಿಸುತ್ತವೆ.

**ಅಧ್ಯಾಯ – 3ರ ಅಡಿ ಟಿಪ್ಪಣಿಗಳು :–**

1. ಡಾ. ಪಿ. ವಿ. ನಾರಾಯಣ, ವಚನ ಪರಿಸರ, ಪುಟ 6
2. ಪಾರ್ವತಿ ಐ. ಚಿಕ್ಕಿ, ಶರಣ ಮಡಿವಾಳ ಮಾಚಿದೇವ, ಪುಟ 34
3. ಡಾ. ವರದಾ ಶ್ರೀನಿವಾಸ, ಸುವರ್ಣಸಿರಿ, ಪುಟ – 62
4. ಡಾ. ಬಿ. ಆರ್. ಹಿರೇಮಠ, ಸಂಕೀರ್ಣವಚನ ಸಂಪುಟ 4, ಪುಟ 269
5. ಡಾ. ಎಲ್ ಬಸವರಾಜು, ಬಸವ ವಚನಾಮೃತ, ಪುಟ 76
6. ಎಂ. ಆರ್. ಶ್ರೀನಿವಾಸಮೂರ್ತಿ, ವಚನಧರ್ಮಸಾರ, ಪುಟ 206
7. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 190
8. ಅದೇ., ಪುಟ 249
9. ಅದೇ., ಪುಟ 168
10. ಅದೇ., ಪುಟ 185
11. ಡಾ. ವರದಾ ಶ್ರೀನಿವಾಸ, ಸುವರ್ಣಸಿರಿ, ಪುಟ 63
12. ಕೆ. ಅಶೋಕ ದೊಮ್ಮಲೂರು, ಮಡಿವಾಳ ಮಾಚಿದೇವ, ಪುಟ 45
13. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 225
14. ಅದೇ., ಪುಟ 224
15. ಡಾ. ಪಿ. ವಿ. ನಾರಾಯಣ, ವಚನ ನಿರ್ವಚನ, ಪುಟ 19
16. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 171
17. ಅದೇ., ಪುಟ 210
18. ಅದೇ., ಪುಟ 251
19. ಡಾ. ಎಂ. ಎಂ. ಕಲಬುರ್ಗಿ, ಸಮಗ್ರ ವಚನ ಸಂಪುಟ 1, ಪುಟ – 154
20. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 224
21. ಅದೇ., ಪುಟ 221
22. ಡಾ. ಎಲ್. ಬಸವರಾಜು, ಬಸವಣ್ಣನವರ ವಚನಗಳು, ಪುಟ 171
23. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 297
24. ಎಸ್. ಉಮಾದೇವಿ, ಅಂಬಿಗರ ಚೌಡಯ್ಯನ ವಚನಗಳು, ಪುಟ 27

25. ಡಾ. ಎಲ್. ಬಸವರಾಜು. ಬಸವವಚನಾಮೃತ. ಪುಟ – 86.

26. ಡಾ. ಬಿ. ಆರ್. ಹಿರೇಮಠ. ಸಂಕೀರ್ಣ ವಚನ ಸಂಪುಟ 3. ಪುಟ 255

27. ಅದೇ.. ಪುಟ 177

28. ಅದೇ.. ಪುಟ 198

29. ಡಾ. ಎಲ್. ಬಸವರಾಜು, ಬಸವಣ್ಣನವರ ವಚನಗಳು. ಪುಟ 92

30. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 209

31. ಯಮನೂರೇಶ ಬಿರಾದಾರ, ಮಡಿವಾಳ ಮಾಚಿದೇವರ ಜೀವನಚರಿತ್ರೆ, ಪುಟ 78

## ಅಧ್ಯಾಯ – 4

# "ಮಡಿವಾಳ ಮಾಚಿದೇವರ ವಚನಗಳ ದೃಷ್ಟಿಯಲ್ಲಿ ಬಸವಣ್ಣ"

ಕನ್ನಡ ನಾಡಿನಲ್ಲಾದ 12ನೇ ಶತಮಾನದ ಸಾಮಾಜಿಕ ಕ್ರಾಂತಿಯಲ್ಲಿ ಮುಂಚೂಣಿಯಲ್ಲಿದ್ದುಕೊಂಡು, ತನ್ನ ಆಕರ್ಷಕ ವ್ಯಕ್ತಿತ್ವದಿಂದ ಆ ಕಾಲದ ಪಂಡಿತವರ್ಗವನ್ನು ಮತ್ತು ಸಾಮಾನ್ಯ ಜನತೆಯನ್ನು ತನ್ನೆಡೆಗೆ ಸೆಳೆದುಕೊಂಡ ವ್ಯಕ್ತಿ, ವ್ಯಕ್ತಿತ್ವ ಬಸವಣ್ಣ. "ವಚನ ಸಾಹಿತ್ಯ ಪರಂಪರೆಯು ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಒಂದು ತಪೋವನವಿದ್ದಂತೆ, ಪ್ರವೇಶಿಸಿದಾಗ ಸಿದ್ಧಸಾಧಕ ಋಷಿಗಳ ಸಂದರ್ಶನ ಪಡೆದು, ಅವರ ಉದಾತ್ತ ಜೀವನ ಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿಬಿದ್ದು ನಾವು ಮುಕ್ತರಾದಂತೆಯೂ ದಿವ್ಯವಾದ ಆನಂದಾನುಭವ ಉಂಟಾಗುತ್ತದೆ" [1] ಎಂದು ವಚನ ಸಾಹಿತ್ಯ ಪರಂಪರೆಯನ್ನು ವ್ಯಾಖ್ಯಾನಿಸುವ ಎಂ. ಆರ್. ಶ್ರೀನಿವಾಸಮೂರ್ತಿಯವರ ಮಾತುಗಳನ್ನು ಗಮನಿಸಿದಾಗ ವಚನ ಸಾಹಿತ್ಯ ಪರಂಪರೆಯ ಮಹತ್ವ ಅರಿವಾಗುತ್ತದೆ. ವಚನ ಸಾಹಿತ್ಯವೇ ತಪೋವನದ ಉಪನಿಷತ್ಸಾಹಿತ್ಯ, ವಚನಕಾರರೇ ಉಪನಿಷತ್ಕೃತಗಳಾದ ಮಹರ್ಷಿಗಳು ಎನ್ನುವಾಗ ಬಸವಣ್ಣನಂತಹ ಅನೇಕಾನೇಕ ವಚನ ಮಹರ್ಷಿಗಳು ಕಂಡುಬರುತ್ತಾರೆ. ತನ್ನ ಸಮಕಾಲೀನ ವಚನಕಾರರ ಮೇಲೆ ಅಗಾಧವಾದ ಪ್ರಭಾವ ಬೀರುವ ವ್ಯಕ್ತಿ – ವ್ಯಕ್ತಿತ್ವ ಬಸವಣ್ಣನವರದ್ದು. ಸಮಾಜದ ಎಲ್ಲ ವರ್ಗದವರಿಗೂ ಸಮಾನತೆಯು ಸಿಗಬೇಕೆಂಬ ಸದಾಶಯ ಹೊಂದಿದ್ದ ಬಸವಣ್ಣನವರನ್ನು ಜಾತಿಯ ವಾಸನೆ ಬಲವಾಗಿ ಕಾಡಿರಬೇಕು. ಅದಕ್ಕಾಗಿಯೇ ಉತ್ತಮ ಕುಲದಲ್ಲಿ ಹುಟ್ಟಿಹೆನೆಂಬ ಕಷ್ಟದ ಹೊರೆಯು ಹೊರಿಸದಿರಯ್ಯಾ" ಎನ್ನುತ್ತಲೇ

"ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹಾರನೆಂಬೆನೆ ಕಕ್ಕಯ್ಯನ?
ಮಾದಾರನೆಂಬೆನೆ ಚನ್ನಯ್ಯನ?
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯಾ" [2]

ಎನ್ನುತ್ತಾ ಹುಟ್ಟಿನಿಂದ ಕೀಳು ಕುಲದವರಾದ ಮಾದಾರ ಚನ್ನಯ್ಯನನ್ನು, ಡೋಹರ ಕಕ್ಕಯ್ಯನನ್ನು, ಮಡಿವಾಳ ಮಾಚಯ್ಯನನ್ನು ಮಹಾನ್ ಸಾಧಕರೆಂದೂ, ಅವರ ಹುಟ್ಟಿನ ಜಾತಿ ಹಿಡಿದು ಕರೆಯುವುದು ಅಷ್ಟು ಸಮಂಜಸವಲ್ಲವೆಂದು ಬಸವಣ್ಣನವರ ದೃಢ ನಿಲುವಾಗಿತ್ತು. ಕುಲದ ಕಾರಣಕ್ಕಾಗಿ ಅವಮಾನಕ್ಕೊಳಗಾದ ಜನಸಮುದಾಯದಲ್ಲಿ ಆತ್ಮವಿಶ್ವಾಸ ತುಂಬುವ ಚಿಂತನೆ ಬಸವಣ್ಣ ಮತ್ತು ಇತರ ಶಿವಶರಣ ವಚನಕಾರರದ್ದಾಗಿತ್ತು. ಶ್ರಮಿಕ ವರ್ಗದ ಕರ್ತವ್ಯಪ್ರಜ್ಞೆಗೆ ಹೆಚ್ಚಿನ ಮನ್ನಣೆಯನ್ನು ತಂದುಕೊಟ್ಟ ಬಸವಣ್ಣನವರು, ಮಡಿವಾಳ

ಮಾಚಯ್ಯನವರ ಮೇಲೆ ಅಪರಿಮಿತವಾದ ಪ್ರಭಾವ ಬೀರಿರುವುದನ್ನು ಮಾಚಯ್ಯನವರ ವಚನಗಳ ಶೋಧದಿಂದಾಗಿ ಫಲಿತವಾಗುತ್ತದೆ. ಬಿಜ್ಜಳನ ಆಸ್ಥಾನದಲ್ಲಿ ಮಹಾಮಂತ್ರಿಯಾಗಿ ಕರ್ತವ್ಯ ನಿರ್ವಹಿಸಿದ ಬಸವಣ್ಣನವರು ಉತ್ತಮ ಕುಲದಲ್ಲಿ ಹುಟ್ಟಿದರೂ, ತಾವು ಶ್ರೇಷ್ಠಕುಲದವರೆಂದು ಹೇಳಿಕೊಳ್ಳದೆ, 'ಶಿವಭಕ್ತರಿಗಿಂತ ಹಿರಿಯರಿಲ್ಲ, ಎನಗಿಂತ ಕಿರಿಯರಿಲ್ಲ' ಎನ್ನುವ ವಿನಮ್ರತೆಯನ್ನು ಸಾರುತ್ತಲೇ ಸಹಜ, ಸರಳ ಸ್ವಭಾವದ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡವರು "ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ" ಎನ್ನುವ ಮೂಲಕ ಗೌರವ ಕೊಡುವ, ತೆಗೆದುಕೊಳ್ಳುವ ಸಂಸ್ಕೃತಿಯ ವಿಚಾರಗಳನ್ನು, ಪ್ರತಿಪಾದಿಸುತ್ತಾರೆ. ವೇದ ಆಗಮಗಳನ್ನು ಬಸವಣ್ಣನವರು ವಿರೋಧಿಸುವ, ಖಂಡಿಸುವ ರೀತಿಯು ಅನನ್ಯತೆಯಿಂದ ಕೂಡಿದೆ. "ವೇದಕ್ಕೆ ಒರೆಯಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ, ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯ್ಯುವೆ" ಎಂದು ವೇದಾಗಮಗಳನ್ನು ವಿಡಂಬಿಸುತ್ತಾರೆ. ಬಸವಣ್ಣನವರಂತೆಯೇ ಮಡಿವಾಳ ಮಾಚಯ್ಯನವರು ವೇದ, ಶಾಸ್ತ್ರ, ಪುರಾಣ, ಆಗಮ, ಉಪನಿಷತ್ತುಗಳನ್ನು ಬಹಳ ನಿಷ್ಠುರವಾಗಿ ವಿರೋಧಿಸುತ್ತಾರೆ. ಬಸವಣ್ಣನವರಂತೆಯೇ ವೇದಾಗಮಗಳನ್ನು ಖಂಡಿಸಿದರೂ ಪ್ರಕಟಪಡಿಸುವ ವಿಧಾನವು ಭಿನ್ನವಾಗಿದೆ. ಒಂದೇ ವಿಷಯವನ್ನು ವಿಭಿನ್ನ ರೀತಿಯಲ್ಲಿ ಮಾಚಯ್ಯನವರು ಚಿತ್ರಿಸುವುದನ್ನು ಗುರುತಿಸಬಹುದಾಗಿದೆ. ನಿರ್ಭಯರಾಗಿ ಅಂದಿನ ಸಮಾಜದ ಮೇಲ್ವರ್ಗದವರನ್ನು ಚಾಟಿಯ ಮಾತಿನ ಮೂಲಕ, ಕತ್ತಿಯ ಹರಿತವಾದ ವಚನಗಳ ಮುಖೇನ ಕುಟುಕುವ ಪರಿ ವಿಶಿಷ್ಟವಾಗಿದೆ.

"ವೇದ ವಿಪ್ರರ ಬೋಧೆ, ಶಾಸ್ತ್ರ ಸಂತೆಯ ಮಾತು
ಪುರಾಣ ಪುಂಡರ ಗೋಷ್ಠಿ
ಆಗಮ ಅನೃತದ ನುಡಿ
ತರ್ಕ ವ್ಯಾಕರಣ ಕವಿತ್ವ ಪ್ರೌಢಿ
ಇಂತಿವರುಗದ ಮೇಲೆ ಲಿಂಗವಿಲ್ಲದ ಭಾಷೆ ಇದು ಕಾರಣ,
ತನ್ನೊಳಗನರಿದ ಅನುಭಾವಿಯಿಂದ ಘನವಿಲ್ಲೆಂದ ಕಲಿ ದೇವ" [3]

ವಚನ ಸಾಹಿತ್ಯದ ಮುಖ್ಯ ಅಂಶವಾದ ತಾತ್ವಿಕ ನಿಲುವುಗಳನ್ನು ಬೋಧಿಸಿದಾಗ ವೈದಿಕ, ವಿರೋಧಿಗಳ ನಿಲುವುಗಳು ವ್ಯಕ್ತವಾದಾಗ ಬಸವಾದಿ ಶಿವಶರಣರು, ಮಡಿವಾಳ ಮಾಚಯ್ಯನವರೂ ಸ್ಪಷ್ಟವಾಗಿ ಟೀಕಿಸುವುದನ್ನು ಅವರ ವಚನಗಳಲ್ಲಿ ಕಾಣಬಹುದಾಗಿದೆ. ವೇದ, ಶಾಸ್ತ್ರ, ಪುರಾಣಗಳಿಗಿಂತಲೂ ತನ್ನ ಸ್ವಾನುಭಾವವೇ ಪರಮ ಶ್ರೇಷ್ಠವಾದ್ದದೆಂದು, ಕಲಿದೇವರ ದೇವ ತನಗಿಂತ ಭಿನ್ನ ದೊಡ್ಡದು ಏನಿಲ್ಲವೆಂದು ಮಡಿವಾಳ ಮಾಚಯ್ಯನವರು ತಮ್ಮ ಸ್ವಾನುಭವವೇ ದೊಡ್ಡದೆಂದು ನಿಸ್ಸಂಶಯವಾಗಿ ಬಲು ಸುಂದರವಾಗಿ ವಿವರಿಸುವರು.

ಮಡಿವಾಳ ಮಾಚದೇವರು ಸುಮಾರು ತೊಂಭತ್ತಕ್ಕೂ ಹೆಚ್ಚಿನ ವಚನಗಳಲ್ಲಿ ಬಸವಣ್ಣನವರನ್ನು ಚಿತ್ರಿಸುತ್ತಾರೆ. ಬಸವಣ್ಣನವರನ್ನು ಕುರಿತ ಮಾಚಯ್ಯನವರ ಪ್ರತಿಯೊಂದು ವಚನಗಳು ಒಂದಕ್ಕಿಂತ ಒಂದು ವಿಭಿನ್ನವಾದ ವಿಚಾರಗಳನ್ನು ಪರಿಚಯಿಸುತ್ತವೆ. ಬಸವಣ್ಣನವರ ಬಗೆಗಿರುವ ಪ್ರತಿವಚನವನ್ನು ಅಭ್ಯಸಿಸಿದಾಗ ಬಸವಣ್ಣನವರು

ಮಾಚಯ್ಯನವರ ಕಾಯದ ತುಂಬೆಲ್ಲಾ ಆವರಿಸಿಕೊಂಡಿರುವುದರ ಅರಿವಾಗುತ್ತದೆ. ಕಲ್ಯಾಣಕ್ಕೆ ಪ್ರವೇಶಿಸಿದ ಸಂದರ್ಭದಲ್ಲಿ ಅನುಭವ ಮಂಟಪದ ಪೀಠಾಧ್ಯಕ್ಷರಾದ ಅಲ್ಲಮ ಪ್ರಭುಗಳು ಮಾಚಿದೇವರನ್ನು ಕುರಿತು ನಿಮ್ಮ ಅಭೀಷ್ಟವೇನು? ಎಂದು ಪ್ರಶ್ನಿಸಿದಾಗ "ಬಸವಣ್ಣನ ಮನೆಯ ಊಳಿಗದವನಾಗಿ ಭಕ್ತಿಪ್ರಸಾದವ ಬೇಡುವೆ, ಪ್ರಭುದೇವರ ತೊತ್ತಿನ ಮಗನಾಗಿ ಜ್ಞಾನ ಪ್ರಸಾದವ ಬೇಡುವೆ, ಸಿದ್ಧರಾಮನ ಮನೆಯ ಮಗನಾಗಿ ಪ್ರಾಣಪ್ರಸಾದವ ಬೇಡುವೆ" ಎಂದು ಅಲ್ಲಮ ಪ್ರಭುಗಳಿಗೆ ಉತ್ತರ ನೀಡುತ್ತಾರೆ. ಮುಂದುವರೆದು ಅಲ್ಲಮ ಪ್ರಭುಗಳು "ನಿಮ್ಮ ಶರಣರೆನ್ನಬಹುದೇ? ನಿಮ್ಮ ಕಾಯಕವೇನು? ಈ ಘಂಟಾನಾದವೇನು? ಎಂದು ಮರು ಪ್ರಶ್ನಿಸಿದಾಗ, ಮಾಚಿದೇವರು" ಬಸವನಾಮವಲ್ಲದೆ ಅನ್ಯವನಾಡೆನು ಉಸಿರೆನು ಕೇಳೆನು – ಎಂಬ ಸಂಕಲ್ಪದಿಂದ ಘಂಟಾಶಬ್ಧದ ಓಂಕಾರದಲ್ಲಿ ಬರುವ 'ಅ'ಕಾರ– 'ಉ'ರಕಾರ, 'ಮ'ಕಾರಗಳ ಆನಂದಾಮೃತದಿಂದ ತೃಪ್ತನಾಗಿ "ಮಡಿಯ ಮಾಡುವರಣ್ಣ, ನಾವು ಮಡಿವಾಳರಹುದಣ್ಣ ಕೇಳಿರಿ ನೀವು ಎಂದುತ್ತರಿಸುತ್ತಾರೆ. ಬಸವಣ್ಣನವರೆಂದರೆ ಮಾಚಿದೇವರಿಗೆ ಎಲ್ಲಿಲ್ಲದ ವಿಶೇಷ ಪ್ರೀತಿ. ಜಗದ ತುಂಬಾ ನೀನು ಯಾವ ಯಾವ ಕಡೆಗೆ ದಶದಿಕ್ಕುಗಳಲ್ಲಿ ಹೊರಳಿ ಹೊರಳಿ ಕಣ್ಣರಳಿಸಿ ನೋಡುವಿಯೋ ಅಲ್ಲೆಲ್ಲಾ, ಅತ್ತ ಕಡೆಯಲ್ಲೆಲ್ಲಾ ಹಬ್ಬಿರುವ ಬಸವನೆಂಬ ಬಳ್ಳಿಯು ತುಂಬಿ ತೋರುತ್ತಲಿರುವುದು. ಎತ್ತೆತ್ತಿನೋಡಿದರೆ ಲಿಂಗವೆಂಬ ಗೊಂಚಲು ದೇವರೆಂಬವುಗಳು ಸಮೂಹ ಸಮರಸವೇ ಬೆರೆದುದಾಗಿ ತೋರುತ್ತಿರುವುದು, ಆ ಗೊಂಚಲನ್ನು ಒತ್ತಿ ಹಿಂಡಿದರೆ ಅದರ ಮುಖಾಂತರ ಭಕ್ತಿಯೆಂಬ ರಸವು ಒಸರುತ್ತಿರುವುದು, ಸೋರುತ್ತಿರುವುದು, ವಿಶಾಲವಾದ ಯೋಗ್ಯವಾದ ಹಾಗೂ ತನ್ನಿಂದ ತಾನೆ ಎಲ್ಲಾ ಕಡೆಗೂ ವ್ಯಾಪಕವಾಗಿರುವ ಮತ್ತು ಅತ್ಯಂತ ಸಮೀಪ ಹತ್ತಿರವಾಗಿದ್ದು. ಸಜ್ಜಾದ ಸಿದ್ಧವಾಗಿರುವ ಬಸವನ ಕರುಣೆಯು ಸದಾ ಅತಿ ಹಿತವಾದುದು, ಇದೆಲ್ಲ ಬಸವಣ್ಣನವರಿಂದ ಇದೆಲ್ಲವು ಬಲ್ಲವರಾಗಿದ್ದರೆ ಹೇಳಿರಿ. ಅರಿಯದಿದ್ದರೆ ನೀವು ಕೇಳಿರಿ ಬಸವಾ, ಬಸವಾ ವೇದವನ ಭಕ್ತಿಯು ಅದು ಬಯಲ ಸ್ವರೂಪದ್ದು, ಶೂನ್ಯ ಸ್ವರೂಪದ್ದು, ದಿವ್ಯ ಸಾಕ್ಷಾತ್ಕಾರವಾದದ್ದು, ಮೋಕ್ಷ ರೂಪದ್ದು ಕಾಣಾ ಕಲಿದೇವರ ದೇವಾ ಎಂದು ಮಡಿವಾಳ ಮಾಚಿದೇವರು ವರ್ಣಿಸುತ್ತಾರೆ.

"ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ
ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ
ಆ ಮತವು ಬಸವಣ್ಣನಿಂದ, ಸ್ವಾಯತವು ಬಸವಣ್ಣನಿಂದ
ಸನ್ನಿಹಿತವು ಬಸವಣ್ಣನಿಂದ,
ಗುರು ಬಸವಣ್ಣನಿಂದ, ಲಿಂಗ ಬಸವಣ್ಣನಿಂದ,
ಜಂಗಮ ಬಸವಣ್ಣನಿಂದ
ಪಾದೋದಕ ಬಸವಣ್ಣನಿಂದ, ಪ್ರಸಾದ ಬಸವಣ್ಣನಿಂದ,

ಅತ್ತ ಬಲ್ಲಡೆ ನೀವು ಹೇಳಿರೆ

ಇತ್ತ ಬಲ್ಲಡೆ ನೀವು ಕೇಳಿರೆ

ಬಸವಾ ಬಸವಾ ಬಸವಾ ಎಂದು ಮಜ್ಜನಕ್ಕೆರೆಯುದವನ ಭಕ್ತಿ

ಶೂನ್ಯ ಕಾಣಾ, ಕಲಿದೇವರ ದೇವ" [4]

ಮಡಿವಾಳ ಮಾಚಿದೇವರು ಕಲಿದೇವರದೇವನಲ್ಲಿ ಸದಾಕಾಲವೂ ಬಸವಣ್ಣನ ಒಡನಾಟದಲ್ಲಿರುವಂತೆ, ಅನುಗ್ರಹಿಸುವಂತೆ ವಚನಭಾಗವೊಂದರಲ್ಲಿ ವಿವರಿಸುತ್ತಾರೆ. ಕಲಿದೇವಯ್ಯ ನನ್ನನ್ನು ನಿಮ್ಮ ಧ್ಯಾನದಲ್ಲಿ ನಿಲುಕದಂತೆ ಮಾಡದಿದ್ದರೂ ಸರಿಯೇ! ಬಸವಣ್ಣನ ಧ್ಯಾನದಲ್ಲಿರುವಂತೆ ಮಾಡಯ್ಯಾ ಎಂದು ಬೇಡುತ್ತಾರೆ. ಸದಾ ಕಾಲವೂ ಬಸವಣ್ಣನನ್ನು ನೆನೆಯುವಂತೆ ಸ್ಮರಿಸುವಂತೆ, ಲಿಂಗವೇದ್ಯ, ಜಂಗಮವೇದ್ಯ, ಪ್ರಸಾದವೇದ್ಯ, ನಿಜಪದವೇದ್ಯ, ಮಹಾವೇದ್ಯ ಬಸವಣ್ಣನವರ ಸಂಗದಲ್ಲಿರುವಂತೆ ಮಾಡೆಂದು ಕಲಿದೇವರಲ್ಲಿ ಪ್ರಾರ್ಥಿಸುತ್ತಾರೆ. ಪರಮಾತ್ಮನ ಅಪ್ಪಣೆಯ ಮೇರೆಗೆ, ಆದೇಶಕ್ಕನುಸರಿಸಿ ಬಸವಣ್ಣನವರು ಈ ಧರಣಿಯಮೇಲೆ ಅವತರಿಸಿದರು. ಶಿವಶರಣರೆಲ್ಲರಿಗೆ ನಿಜಮುಕ್ತಿಯ ಪ್ರಾಪ್ತಿಗಾಗಿ ಇರುವ ನಿಜತತ್ವದ ತಿರುಳುಸಾರವನ್ನು, ಸದ್ಭಕ್ತಿಯ ಮಾರ್ಗವನ್ನು ತೋರಿದರು, ಭಕ್ತಿಯ ಸಮೂಹ ಭಂಡಾರವನ್ನು ಮುಕ್ತಿ ಪ್ರಾಪ್ತಿಗೋಸ್ಕರ, ಶಿವಶರಣರಿಗೆ ಬಸವಣ್ಣ ಉಪದೇಶಿಸಿದರು. ಎಲ್ಲ ಶಿವಶರಣರಿಗೆ ನಿತ್ಯಲಿಂಗಾರ್ಚನೆಯೊಳಗಿರಿಸಿ ರಕ್ಷಿಸಿ, ಕಾಪಾಡಿದಾತ, ದಯಾನಿಧಿ ಭಕ್ತಿ ಭಂಡಾರಿ ಬಸವಣ್ಣನವರೆಂದು, ಬಸವಣ್ಣನವರ ವ್ಯಕ್ತಿತ್ವಕ್ಕೊಂದು ಹಿರಿಮೆಯ ಗರಿ ಮೂಡಿಸುತ್ತಾರೆ ಮಡಿವಾಳ ಮಾಚಿದೇವರು.

ಅನುಭವಮಂಟಪದಲ್ಲಿ ಪ್ರಭುದೇವರು ಮಡಿವಾಳ ಮಾಚಯ್ಯನವರ ಅನುಭವ ಸಾರವನ್ನು ಒರೆಹಚ್ಚಿ ನೋಡುವುದಕ್ಕಾಗಿ "ಎಂತಯ್ಯಾ? ನೊಸಲಲ್ಲಿ ಕಣ್ಣು, ಮನದಲ್ಲಿ ವಿರಸ, ನುಡಿಯುವುದೆಲ್ಲ ಭಕ್ತಿರಸ, ಜ್ಞಾನವೆಂತು ಹೇಳಾ? ಅರುಹಿನ ಕುರುಹಿನ ಮರವೆ ಮಾತಿನೊಳಗಿದೆ, ನಿನ್ನಿಂದ ನಿಜಪದವೆಂತು ಸಾಧ್ಯವಪ್ಪುದು ಹೇಳಾ? ಕುರುಹಳಿದು ಕುರುಹನರಿಯ ಬಲ್ಲರೆ ಗುಹೇಶ್ವರ ಅಂಗದಲ್ಲಿ ಉಭಯಗೆಟ್ಟನಲ್ಲದೆ ಪ್ರಸಾದವಿಲ್ಲ ಕಾಣಾ, ಮಡಿವಾಳ ಮಾಚಯ್ಯ" [5] ಎನ್ನುವ ಪ್ರಶ್ನೆಗೆ ಮಾಚಯ್ಯನವರು ವಿನಯಪೂರ್ವಕವಾಗಿಯೇ ಎನ್ನ ಆದಿಯನೆತ್ತುವನೇ? ಆದ ನೀನೆ ಬಲ್ಲೆ, ಎನ್ನ ಅನಾದಿಯನೆತ್ತಿ ತೋರುವೆನೇ? ಆದ ನೀನೇ ಬಲ್ಲೆ, ಎನಗೆ ಕಾಯವಿಲ್ಲವೆಂಬುದನು, ಬಸವಣ್ಣನ ಕಾರಣ ಮರ್ತ್ಯಕ್ಕೆ ಬಂದರೆ ಬಡ ಉಪಾಧಿಯೆಂಬುದಿಲ್ಲ ನೋಡಾ, ಒಡಲೆ ಬಸವಣ್ಣ, ಪ್ರಾಣವೇ ಚನ್ನಬಸವಣ್ಣ, ಎನ್ನ ಮಹಾಜ್ಞಾನವೇ ನೀವು ನೋಡಾ" ಎಂದು ತ್ರಿಮೂರ್ತಿಗಳ ಸಂಗಮವೇ ಈ ಶರೀರ ಎಂಬುದಾಗಿ ಮಾಚಯ್ಯನವರು ಭಿನ್ನೈಸಿಕೊಂಡು ಮಹಾಶರಣರ ಜ್ಞಾನಜ್ಯೋತಿಯ ಪ್ರಭೆಯಿಂದ ನಾನು ಬದುಕಿದೆನೆಂದು ಉತ್ತರಿಸುತ್ತಾರೆ.

ಮಾಚಯ್ಯನವರ ದೃಷ್ಟಿಯಲ್ಲಿ ಬಸವಣ್ಣ ಎಲ್ಲಾ ಭಕ್ತಿಯ ಭೇದಗಳನ್ನು, ಆದಿ ಅನಾದಿಯನ್ನು, ಸಾಧ್ಯ ಅಸಾಧ್ಯವನ್ನೂ, ಲಿಂಗ ಜಂಗಮವನ್ನೂ ಒಂದಾಗಿ ಕಂಡ ಮಹಾ ಪುರುಷ. ಅಂಥ ಮಹಾಜ್ಞಾನಿಯನ್ನು ನೆನೆದು ಬದುಕಿದೆನು ಎಂದು ತನ್ನ ಅಂತರಂಗದೊಳಗಿನ ಪ್ರೀತಿಯನ್ನು ವ್ಯಕ್ತಪಡಿಸುತ್ತಾರೆ.

ಬಸವಣ್ಣನವರ ಮಹತ್ವ, ಮಹಿಮೆ, ಘನತ್ವ ಮತ್ತು ಅಪರಿಮಿತ ಪ್ರೀತಿ–ಗೌರವಗಳನ್ನು ಮಾಚಯ್ಯನವರು ಚಿತ್ರಿಸಿರುವ ಈ ವಚನಭಾಗ ಬಸವಣ್ಣನವರ ವ್ಯಕ್ತಿ–ವ್ಯಕ್ತಿತ್ವವನ್ನು 'ಜಗದಗಲ, ಮುಗಿಲಗಲ, ಮಿಗೆಯಗಲ, ಪಾತಾಳದಿಂದತತ್ತ, ಬ್ರಹ್ಮಾಂಡದಿಂದತತ್ತ, ಅಪ್ರತಿಮವಾಗಿ ವಿಸ್ತರಿಸುತ್ತದೆ. ಬಸವಣ್ಣನವರು ಸ್ಪರ್ಶಿಸಿದೊಡನೆಯೇ ಲೋಹವನ್ನು ಚಿನ್ನವಾಗಿಸುವ 'ಸ್ಪರ್ಶ ಮಣಿ'ಯಂತಹ ವ್ಯಕ್ತಿ – ವ್ಯಕ್ತಿತ್ವ ಉಳ್ಳವರೆಂದು ಮಾಚಯ್ಯ ವ್ಯಾಖ್ಯಾನಿಸುತ್ತಾರೆ.

ಬಸವಣ್ಣನ ನಡೆ – ನುಡಿ, ದೃಷ್ಟಿ, ಹಸ್ತ, ಭಾವ, ಮನ ಎಲ್ಲವೂ ಸ್ಪರ್ಶಮಣಿಯಂತೆ ಶ್ರೇಷ್ಠವಾದವುಗಳು. ಬಸವಣ್ಣನನ್ನು ನೆನಪುಮಾಡಿಕೊಳ್ಳುವುದೇ ಲಿಂಗಾರ್ಚನೆ, ಪರತತ್ತ್ವ, ಬಸವಣ್ಣನನ್ನು ಸ್ಮರಿಸಿಕೊಂಡರೆ ಅದೇ ನನಗೆ ಕಲ್ಯಾಣವೆಂದು ಮಾಚಯ್ಯನವರು ಕಲಿದೇವಯ್ಯನಲ್ಲಿ ಬಸವಣ್ಣನವರ ಮಹಿಮೆಯನ್ನು ವಿವರಿಸುತ್ತಾರೆ.

"ಬಸವಣ್ಣನ ನಡೆ ಪರುಷ, ಬಸವಣ್ಣನ ನುಡಿ ಪರುಷ
ಬಸವಣ್ಣನ ದೃಷ್ಟಿ ಪರುಷ, ಬಸವಣ್ಣನ ಹಸ್ತ ಪರುಷ
ಬಸವಣ್ಣನ ಭಾವ ಪರುಷ, ಬಸವಣ್ಣನ ಮನ ಪರುಷ
ಬಸವಣ್ಣನ ನೆನವುದೇ ಲಿಂಗಾರ್ಚನೆ, ಬಸವಣ್ಣನ ನೆನೆವುದೇ
ಪರತತ್ತ್ವ, ಬಸವಣ್ಣನ ನೆನೆವುದೇ ಕಲ್ಯಾಣವೆನಗೆ ಕಲಿದೇವಯ್ಯ
ನಿಮ್ಮಶರಣ ಬಸವಣ್ಣನಂತಹ ಮಹಿಮೆ ನೋಡಯ್ಯಾ" [6]

ಮಡಿವಾಳ ಮಾಚಯ್ಯನವರು ತಮ್ಮ ಬದುಕಿನ ಅನುಕ್ಷಣವು ಬಸವಣ್ಣನವರನ್ನೇ ಧ್ಯಾನಿಸುತ್ತಿದ್ದರು. ಸುಖ–ದುಃಖ ಯಾವುದೇ ಬಂದರೂ ಬಸವಣ್ಣನನ್ನೇ ನೆನಪು ಮಾಡಿಕೊಳ್ಳುವೆ, ಲಿಂಗಾರ್ಚನೆ ಮಾಡುವ ಸಂದರ್ಭದಲ್ಲೂ ಬಸವಣ್ಣನನ್ನೇ ನೆನೆಸಿಕೊಳ್ಳುವೆ. ಜಂಗಮಾರ್ಚನೆಯನ್ನು ಮಾಡುವಾಗಲೂ ಬಸವಣ್ಣನನ್ನೇ ನೆನೆಸಿಕೊಳ್ಳುತ್ತಾರೆ. ಬಸವಣ್ಣನನ್ನು ನೆನಪಿಸಿಕೊಳ್ಳದೆ ಭಕ್ತಿ–ಮುಕ್ತಿಯಿಲ್ಲ ಆದುದರಿಂದ ಸದಾಕಾಲ ಬಸವಣ್ಣ ಬಸವಣ್ಣ ಎನ್ನುತ್ತಲಿದ್ದೆನೆಂದು ಬಸವಣ್ಣನವರ ನಾಮದ ಮಹಿಮೆಯನ್ನು ಕೊಂಡಾಡುತ್ತಾರೆ. ಮಾಚಯ್ಯನವರ ಪ್ರತಿ ಉಸಿರಿನಲ್ಲೂ ಬಸವಣ್ಣನನ್ನೇ ಉಸಿರಾಡುತ್ತಿದ್ದರೆನ್ನುವ ವಿಚಾರಗಳು ಬಸವಣ್ಣನವರ ಕುರಿತು ಮಾಚಯ್ಯನವರು ರಚಿಸಿರುವ ಬಹುತೇಕ ವಚನಗಳಿಂದ ವೇದ್ಯವಾಗುತ್ತದೆ. ಸ್ವಾನುಭವದಲ್ಲಿ ಬಸವಣ್ಣನಿಗೆ ನಾನು ಶರಣಾಗಿದ್ದೆನು. ಬಸವಣ್ಣನವರ ನಿಲುವು ಇರುವಿಕೆಯನ್ನು ನೆನೆದು, ಸ್ಮರಿಸುತ್ತಾ ಬದುಕಿದೆನು ಕಾಣಾ ಕಲಿದೇವರ ದೇವಾ ಎಂದೆನ್ನುತ್ತಾ, ಸೃಷ್ಟಿಯಲ್ಲಿ ಜೀವಕೋಟಿಗೆ ಬೇಕಾದಂತಹ ಅವಶ್ಯಕವಾದ ಸಕಲ ಕಾರ್ಯ ಕಲಾಪಗಳನ್ನು ಮತ್ತು ಭಕ್ತರ ಇಷ್ಟಾರ್ಥ ಬೇಡಿಕೆಗಳನ್ನು ಪೂರೈಕೆ ಮಾಡುವುದು ಗುರುವಿನ ಅವಶ್ಯಕವಾದ ಸಕಲ ಕಾರ್ಯ ಕಲಾಪಗಳನ್ನು ಮತ್ತು ಭಕ್ತರ ಇಷ್ಟಾರ್ಥ ಬೇಡಿಕೆಗಳನ್ನು ಪೂರೈಕೆ ಮಾಡುವುದು ಗುರುವಿನ ಮಹತ್ತರ ಕಾರ್ಯವಾಗಿದೆ. ಕಾರಣ ಮಾಡುವಾತ ಗುರುವಯ್ಯಾ ಎಂದು ನುಡಿದಿರುವವರು ಮತ್ತು ಅನಂತ ಪ್ರೀತಿ, ಭಕ್ತಿ ಕೂಡಿಕೊಂಡಿರುವಾಗ ಭಕ್ತನೆಂದೆನಿಸುವನು. ಅವನು ತನಗೆ ಬೇಕಾದ್ದನ್ನು ಪಡೆಯಬೇಕಾದರೆ

ಗುರುವಿಗೆ ಶರಣು ಹೊಕ್ಕು ತನ್ನ ಇಷ್ಟಾರ್ಥ ಕಾರ್ಯ ಮಾಡಿಸಿಕೊಳ್ಳುವನು. ಈ ಮಾಡುವ ಮಾಡಿಸಿಕೊಳ್ಳುವ ಎರಡರ ಚೈತನ್ಯವೇ ಲಿಂಗವಯ್ಯಾ, ಗುರು ಮತ್ತು ಭಕ್ತನಿಗೆ ಸಂಬಂಧಪಡಿಸುವ ಕೊಂಡಿಯಂತೆ. ಸರಪಳಿಯಂತೆ ಇರುವುದು ಲಿಂಗ. ಸಂಗನ ಬಸವಣ್ಣನು ಈ ಸ್ಥೂಲಕಾಯವನ್ನು ನೀಗಿ ದೂರೀಕರಿಸಿ ಸೂಕ್ಷ್ಮ ಶರೀರವ ಕರಸ್ಥಲವಲ್ಲಿಟ್ಟುಕೊಂಡು ಪಂಚಕರ್ಮೇಂದ್ರಿಯ ಹಾಗೂ ಪಂಚ ಜ್ಞಾನೇಂದ್ರಿಯ ಕ್ರಿಯಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಅಲ್ಲದೆ ಮನ, ಬುದ್ಧಿ, ಚಿತ್ತ, ಅಹಂಕಾರ ಅನುಸರಿಸಿ ಅನುಕರಣೆ ಮಾಡಿ ತೋರಿದನು. ಇಂತಹ ಬಸವಣ್ಣನನ್ನು ನೆನೆಯುತ್ತಿರುವೆನು.

ಜಗದಲ್ಲಿ ಜನಿಸಿದ ಮಾನವನಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಪಂಚವಿಷಯಗಳು ಗಂಟು ಬಿದ್ದು, ಮನುಷ್ಯತ್ವವನ್ನೇ ಹಾಳು ಮಾಡಿ ಕಡೆಗೆ ಮರಣಕ್ಕೀಡು ಮಾಡುವುವು ಶಬ್ದದೊಡನೆ ಗುರುವು ಸಂಗಾತಿಯಾಗಿರುವನು. ಶಬ್ದದಿಂದಾಗುವ ಲೋಪ – ದೋಷ ಪಾಪಗಳನ್ನು ನಾಶಗೊಳಿಸುವನು, ಶಬ್ದದಿಂದಾಗುವ ಅಪಾಯ ತಪ್ಪಿಸುವನು. ಸ್ಪರ್ಶದೊಂದಿಗೆ ಲಿಂಗವು ಸಮರಸವಾಗಿರುವುದು, ರೂಪಿನೊಂದಿಗೆ ಯಾವತ್ತೂ ನೇತ್ರದಲ್ಲಿ ಶಿವಲಾಂಚನ ಕಂಗೊಳಿಸುತ್ತಿದೆ. ರಸದೊಂದಿಗೆ ಶಿವಪ್ರಸಾದವು ಬೆರೆತು ಜಿಹ್ವೆವು ಪವಿತ್ರವಾಗಿರುವುದು, ಗಂಧದೊಂದಿಗೆ ಶಿವಾನುಭವವು ಬೆರೆತು, ಸಂಗಾತಿಯಾಗಿದ್ದು ಘ್ರಾಣೇಂದ್ರಿಯವು ಸಂತೋಷಪಡುತ್ತಿರುವುದು. ಈ ಪ್ರಕಾರ ಇರತಕ್ಕಂತವುಗಳನ್ನು ಅರಿತು ಆಚರಣೆ ಮಾಡುವ ಸಮರ್ಥನು ನಮ್ಮ ಬಸವಣ್ಣನು.

ಇನ್ನು ಹರಿದಾಡುವ ಯಾವತ್ತೂ ಚಂಚಲತೆಯಿಂದ ಕೂಡಿರುವ ಮನಸ್ಸಿಗೆ ಧ್ಯಾನ ಸಮರಸಗೊಳಿಸಿ ಚಂಚಲತೆ ನಿಗ್ರಹಿಸಿ ಶಾಂತಿಯನ್ನೀಡುವ ಬುದ್ಧಿಯು ಸದಾ ಸದ್ಬುದ್ಧಿಯಾಗಿ ಪರಿವರ್ತಿಸಿ ವಂಚನೆ ಕಪಟ ವೇಷಗಳಲ್ಲಿದಂತೆ ಕೂಡಿಕೊಂಡಿರುವುದು, ಚಿತ್ತವು ಯಾವತ್ತೂ ಪುಣ್ಯ ಸಂಪಾದನೆಗಾಗಿ, ಸಾಧುಸಂತರ, ಮಹಾತ್ಮರ, ನಿಜ ಜಂಗಮ, ಶಿವಯೋಗಿಗಳಿಗೆ ಕೊಡುವ ಊಟವನ್ನು ಸಿದ್ಧಗೊಳಿಸಿ ಉಣಬಡಿಸುವುದೇ ದಾಸೋಹ ಮತ್ತು ಅಹಂಕಾರ, ಗರ್ವ, ಸೊಕ್ಕು, ಮದ ಇತ್ಯಾದಿಗಳನ್ನು ಅಳಿಸಿ ಆ ಜಾಗದಲ್ಲಿ ಶಿವಜ್ಞಾನವನ್ನು ತುಂಬಿ. ಇವೆಲ್ಲವುಗಳಲ್ಲಿ ಅತೀ ಸಮೀಪವಾಗಿ ಹತ್ತಿರವಿದ್ದು, ಸಜ್ಜಾದ ಸಿದ್ಧವಾದ ರೀತಿಯಲ್ಲಿದ್ದುಕೊಂಡವನು ನಮ್ಮ ಬಸವಣ್ಣನು. ಅಲ್ಲದೆಯೇ, ಬಸವಣ್ಣನು ಸತ್ವಗುಣವು ಪರಿಶುದ್ಧತೆಯೊಂದಿಗಿರುವಂತೆ. ಮತ್ತು ರಜೋಗುಣವು ಒಳ್ಳೆಯದನ್ನು ಲೋಕ ಹಿತವನ್ನು ಸಾಧಿಸುವುದರಲ್ಲಿ ತಲ್ಲೀನತೆಗೊಳಿಸಿ ಸಿದ್ಧಗೊಳಿಸುವನು, ತಮೋಗುಣವು ಜಗತ್ತಿನಲ್ಲಿ ಖ್ಯಾತಿ ಹೊಂದುವಂತೆ ಪ್ರಸಿದ್ಧಗೊಳಿಸುವನು, ಈ ಪ್ರಕಾರವಿರುವ ಮೂರು ರೀತಿಯಲ್ಲಿ ಸದಾ ಸದ್ಗುಣ ಸಂಪಾದಿಸಿದವನು, ಗಳಿಸಿದವನು, ಸಂಪನ್ನನು ನಮ್ಮ ಬಸವಣ್ಣನು, ಮತ್ತು ಎಂದಿಗೂ ಅನ್ಯ ಪದಾರ್ಥ ಇಚ್ಛೆಮಾಡುವ ಕಾಮಾಪೇಕ್ಷೆಯನ್ನು ನಾಶಗೊಳಿಸಿ ಆ ಸ್ಥಾನದಲ್ಲಿ ದೇವಪೂಜೆಯನ್ನು ಮಾಡುವಂತಹ ಅಪೇಕ್ಷೆಯನ್ನು ತುಂಬಿರುವನು, ಇನ್ನೂ ಕ್ರೋಧವು ತನಗೆ ಪ್ರಾಪ್ತಿಯಾಗದಿರುವ ವಸ್ತುವಿನ ಬಗ್ಗೆ ಸಿಟ್ಟಿಗೇಳುವುದು ಹುಟ್ಟು ಸ್ವಭಾವವಾದ ಕಾರಣ ಚಿತ್ತೇಕಾಗ್ರತೆಯನ್ನು ಸೇರಿಸಿ, ಕಣ್ಣು ಮಿಟುಕಿಸದೆ ರೆಪ್ಪೆ ಬಡಿಯದ ರೀತಿಯಲ್ಲಿರಿಸುವುದರಿಂದ ಬಾಹ್ಯವಸ್ತುವಿನ ಪ್ರಾಪ್ತಿಯ ಆಸೆಯು ಇಲ್ಲದಾಗಿ ಹೋಗುತ್ತದೆ. ಲೋಭವು ಅಂದರೆ ಕಡು ಜಿಪುಣತನವು ಬಹಳ ಜಿಪುಣತನದ, ಲೋಭಿ ಮನುಷ್ಯನಲ್ಲಿ ದೇವ ಭಕ್ತಿಯನ್ನು ತುಂಬುವುದರಿಂದ

ಆ ಲೋಭವು ನಾಶವಾಗಿ ದೈವೀ ಭಕ್ತಿ ಹುಟ್ಟುವುದರಿಂದ ಪರಮ ಶಾಂತಿಪ್ರಾಪ್ತಿಯಾಗುವುದು, ಮೋಹವೆಂದರೆ ಪ್ರೀತಿಸುವುದು. ನಶ್ವರವಾದ, ಸ್ಥಿರವಲ್ಲದೆ ವಸ್ತುಗಳನ್ನು ಪ್ರೀತಿಸುವುದನ್ನು ಬಿಡಿಸಿ ಅಲ್ಲಿರುವ ಮೋಹವಳಿಸಿ ಸ್ಥಿರವಾದ ತರದಿಂದ ಮಾಡುವ ಪೂಜೆಯ ರೀತಿನೀತಿಗಳನ್ನು ತಿಳಿಸಿ ಸೊಕ್ಕಿನ, ಅಹಂಕಾರದ ಭಾವವನ್ನು ಅಳಿಸಿ ಅಲ್ಲಿ ನಿರಂಹಂಕಾರ ಭಾವವನ್ನು ಸ್ಥಿರಪಡಿಸಿ ಹೊಟ್ಟೆಯ ಕಿಚ್ಚು, ದ್ವೇಷವನ್ನು ಅಳಿಸಿ, ಭವವು ಇಲ್ಲದಂತೆ ಮಾಡಿದಂಥವರಲ್ಲಿ ನಿಪುಣನು, ಜಾಣನು ನಮ್ಮ ಬಸವಣ್ಣನು, ಮಹಾದೇವನು ನಮ್ಮ ಬಸವಣ್ಣನು, ಅಲ್ಲದೆ ಮಹಾಲಿಂಗನು ನಮ್ಮ ಬಸವಣ್ಣನು, ನಮ್ಮ ಬಸವಣ್ಣಂಗೆ ಸರಿ ಸಮಾನ ವ್ಯಕ್ತಿಯನ್ನು, ಸರಿಗಟ್ಟುವ ಪುರುಷನನ್ನೂ, ಇನ್ನೊಬ್ಬರನ್ನು ಈ ಭೂಮಿಯ ಮೇಲೆ ನಾನು ಕಾಣೆನು ಕಾಣಾ ಕಲಿದೇವರ ದೇವಾ ಎಂದು ಬಸವಣ್ಣನವರ ಸಂಪೂರ್ಣ ವ್ಯಕ್ತಿತ್ವವನ್ನು ತಮ್ಮ ವಚನಭಾಗದಲ್ಲಿ ಮಡಿವಾಳ ಮಾಚಯ್ಯನವರು ಸವಿವರವಾಗಿ ಚಿತ್ರಿಸಿದ್ದಾರೆ.

"ಶಬ್ದ ಸ್ಪರ್ಶ ರೂಪು ರಸ ಗಂಧ
ಪಂಚವಿಷಯ ಸಂಗತವಾವುದೆಂದಡೆ
ಶಬ್ದಗುರು, ಸ್ಪರ್ಶಲಿಂಗ, ರೂಪು ಜಂಗಮ
ರಸಪ್ರಸಾದ, ಗಂಧ ಅನುಭಾವ
ಇಂತೀ ಪಂಚವಿಂಶತಿಯವನಲ್ಲವೆನಬಲ್ಲವನಾಗಿ ಬಸವಣ್ಣನು
ಮನ ಬುದ್ಧಿ ಚಿತ್ತ ಅಹಂಕಾರ ಚತುರ್ವಿಧ ಸ್ಥೂಲವಾವುದೆಂಡದೆ
ಮನ ಧ್ಯಾನ ಬುದ್ಧಿವಂಚನೆ ಇಲ್ಲದುದು
ಚಿತ್ತ ದಾಸೋಹ ಅಹಂಕಾರ ಜ್ಞಾನ
ಇವರಲ್ಲಿ ಮಾಡಬಲ್ಲವನಾಗಿ ಬಸವಣ್ಣನು
ಸತ್ವರಜ ತಮವೆಂಬೀ ಪ್ರಕಣವಾವುದೆಂದಡೆ
ಸತ್ವಶುದ್ಧ ರಜಸಿದ್ಧ ತಮಪ್ರಸಿದ್ಧ
ಇಂತೀ ತ್ರಿವಿಧ ಸನ್ನಿಹಿತವಾಗಿ ಬಸವಣ್ಣನು
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವಾವುದೆಂಡದೆ
ಕಾಮ ಪೂಜೆ, ಕ್ರೋಧ ಅನಿಮಿಷ
ಲೋಭ ಭಕ್ತಿ, ಮೋಹ ಅಷ್ಟವಿಧಾರ್ಚನೆ
ಮದ ಷೋಡಶೋಪಚಾರ

ಮತ್ಸರ ಭವಂ ನಾಸ್ತಿ ಎಂದೆನಬಲ್ಲನಾಗಿ ಬಸವಣ್ಣನು

ಮಹಾದೇವನು ಬಸವಣ್ಣನು

ಮಹಾಲಿಂಗವು ಬಸವಣ್ಣಂಗೆ 

ಮತ್ತೇನು ಅಪ್ರತಿಮ ಕಾಣಾ, ಕಲಿದೇವಯ್ಯಾ" [7]

ಬಸವಣ್ಣನವರನ್ನು ಮಾತ್ರವಲ್ಲದೆ ಮಡಿವಾಳ ಮಾಚಯ್ಯನವರು ತಮ್ಮ ವಚನ ಸಾಹಿತ್ಯದಲ್ಲಿ ಬಸವಾದಿ ಶರಣರನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ತೊಂಭತ್ತೆಂಟಕ್ಕೂ ಹೆಚ್ಚಿನ ವಚನಗಳಲ್ಲಿ ಬಸವಣ್ಣನನ್ನೂ, ಮೂವತ್ತೆರಡು ವಚನಗಳಲ್ಲಿ ಸಿದ್ಧರಾಮನನ್ನೂ, ಇಪ್ಪತ್ತೊಂದು ವಚನಗಳಲ್ಲಿ ಚೆನ್ನಬಸವಣ್ಣನವರನ್ನೂ, ಇಪ್ಪತ್ತು ವಚನಗಳಲ್ಲಿ ಪ್ರಭುದೇವರನ್ನು ಮತ್ತು ಎರಡು ವಚನಗಳಲ್ಲಿ ಅಕ್ಕಮಹಾದೇವಿಯನ್ನು ಸ್ಮರಿಸಿದ್ದಾರೆ. ಸಮಕಾಲೀನ ವಚನಕಾರರನ್ನು ಅತ್ಯಂತ ಪ್ರೀತಿ, ಗೌರವಾದರಗಳಿಂದ, ಅಭಿಮಾನದಿಂದ ಪ್ರಶಂಸಿಸುತ್ತಾನೆ. ಚಿನ್ಮಯಶರಣ ವಸ್ತ್ರವನ್ನೂ ಮಡಿ ಮಾಡುತ್ತಲೇ ಅಂತರಂಗದ ಮಡಿಯ ಕಾಯಕವನ್ನು ಕೈಗೊಳ್ಳುತ್ತಾರೆ.

ನನ್ನ ಮನಸ್ಸಿನ ತುಂಬೆಲ್ಲವೂ ಬಸವಣ್ಣನವರೇ ತುಂಬಿಕೊಂಡಿದ್ದಾರೆ. ನನ್ನ ಮಾತಿನ ತುಂಬೆಲ್ಲಾ ಚೆನ್ನಬಸವಣ್ಣನೇ ತುಂಬಿದ್ದಾನೆ. ನನ್ನ ದೇಹದ ಪ್ರತಿಯೊಂದು ನರನಾಡಿಗಳೆಲ್ಲದರಲ್ಲೂ ಪ್ರಭುದೇವರೇ ತುಂಬಿದ್ದಾರೆ. ಈ ಮೂವರ ಪಾದವನ್ನು ಕಾಯಾ, ವಾಚಾ, ಮನಸಾ ಶುದ್ಧಿಯಿಂದ ನಂಬಿ ನಮೋ ನಮೋ ಎನ್ನುತ್ತಿರುವೆನು ಎಂದು ಮಾಚಯ್ಯನವರು ಬಸವಣ್ಣನವರನ್ನು ಮಾತ್ರವಲ್ಲದೆ ಚೆನ್ನಬಸವಣ್ಣ, ಪ್ರಭುದೇವರ ಘನಮಹಿಮೆಯನ್ನು ವಚನದಲ್ಲಿ ಕೊಂಡಾಡುತ್ತಾರೆ. ಸಪ್ತ ಲೋಕಗಳಾದ ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕಗಳಲ್ಲಿರುವವರೆಲ್ಲರೂ, ನಾಗಲೋಕದವರೂ, ಕೈಲಾಸಧಿಪತಿಗಳೆಲ್ಲರೂ, ಬಸವಣ್ಣನವರನ್ನು ಹೊಗಳುತ್ತಿರುವುದರಿಂದ, ನಾನು ಅವರಿಂದ ಬಸವಣ್ಣನವರ ಪ್ರಭಾವಕ್ಕೊಳಗಾಗಿ ಬಸವಣ್ಣನೆಂದೆನು, ಗುರು–ಲಿಂಗ–ಪ್ರಸಾದಿ, ತನು–ಮನ ಧನವೆಲ್ಲವೂ, ಸಕಲಾಧಾರ, ಪದವೀಯನೀವ, ಪಂಚಲಿಂಗವೆಲ್ಲವೂ, ಸೋಹಿ – ದಾಸೋಹಿ ಬಸವಣ್ಣನೆನ್ನವರು. ಪುರವರಾಧೀಶ್ವರೆಲ್ಲರೂ ಪುರದ ಒಡೆಯ ಬಸವಣ್ಣನೆನ್ನುತ್ತಿರುವರು, ಅಮರಾಧೀಶ್ವರೆಲ್ಲರೂ ಅಮರಪತಿಯೇ ಬಸವಣ್ಣನೆಂದು ಹೊಗಳುತ್ತಿರುವರು, ಕೈಲಾಧಿಪತಿಗಳೆಲ್ಲರೂ ಶಿವಲಿಂಗವೇ ಬಸವಣ್ಣ ಎನ್ನುತ್ತಿರುವರು, ಇಡೀ ದೇವತೆಗಳ ಸಮೂಹವೆಲ್ಲವೂ ಮಹಾಲಿಂಗವೇ ಬಸವಣ್ಣನೆಂದು ಕರೆಯುತ್ತಿದ್ದಾರೆ, ಎಲ್ಲರೂ ಬಸವಬಸವಣ್ಣಾ ಎಂದು ಕೂಗಿಕರೆದು, ತನುಮನ ಧನವನ್ನೆಲ್ಲವನ್ನೂ ಗುರುಲಿಂಗ ಜಂಗಮಗೆ ಬಸವಣ್ಣನು ನಿವೇದಿಸುತ್ತಿರುವ ಕಾರಣದಿಂದ ನಾನೂ ಕೂಡ ಬಸವಣ್ಣ ಬಸವಣ್ಣನೆಂದು ಕರೆಯುವಂತಾಯಿತು. ಬಸವಣ್ಣ ಎಂದು ಕರೆದು ಬಯಲಾದೆನು. ಕಲಿದೇವರ ದೇವ ಎಂದು ಕೊಂಡಾಡುತ್ತಾನೆ.

"ಪುರವರಾಧೀಶ್ವರೆಲ್ಲರೂ ಪುರದೊಡೆಯ ಬಸವಣ್ಣ ಎಂದೆಂಬರು

ಅಮರಾಧೀಶ್ವರೆಲ್ಲರೂ ಅಮರಪತಿ ಬಸವಣ್ಣ ಎಂದೆಂಬರು

ಕೈಲಾಸಾಧಿಪತಿಗಳೆಲ್ಲರೂ ಶಿವಲಿಂಗ ಬಸವಣ್ಣ ಎಂದೆಂಬರು

ದೇವಸಮೂಹವೆಲ್ಲ ಮಹಾಲಿಂಗ ಬಸವಣ್ಣ ಎಂದೆಂಬರು

ಪಂಚವಕ್ತ್ರಗಣಂಗಳೆಲ್ಲರೂ ಪಂಚಲಿಂಗ ಬಸವಣ್ಣ ಎಂದೆಂಬರು

ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯಗಣಂಗಳೆಲ್ಲರೂ

ಪದವೀವ ಬಸವಣ್ಣ ಎಂದೆಂಬರು

ನಾಗಲೋಕದವರೆಲ್ಲರೂ ಸಕಲಾಧಾರ ಬಸವಣ್ಣ ಎಂದೆಂಬರು

ಮರ್ತ್ಯಲೋಕದವರೆಲ್ಲರೂ ಗುರುಲಿಂಗ ಬಸವಣ್ಣ ಎಂದೆಂಬರು

ಭಕ್ತ ಬಸವಣ್ಣ ಎಂದೆಂಬರು, ಸೋಹಿ ದಾಸೋಹಿ ಬಸವಣ್ಣ ಎಂದೆಂಬರು

ತನುಮನಧನವ ಗುರುಲಿಂಗ ಜಂಗಮಕ್ಕೆ ನಿವೇದಿಸುವಾತ

ಬಸವಣ್ಣ ಎಂದೆಂಬರು

ಇದು ಕಾರಣ, ನಾನು ಬಸವಣ್ಣ ಬಸವಣ್ಣ ಬಸವಣ್ಣ ಎಂದು

ಬಯಲಾದೆನು ಕಾಣಾ, ಕಲಿದೇವರ ದೇವ" [8]

ಬಸವಣ್ಣನವರನ್ನು 'ಜಂಗಮಮೂರ್ತಿ' ಎಂದು ಮಾಚಯ್ಯನವರು ಹೊಗಳುತ್ತಾರೆ. ಆ ಜಂಗಮಮೂರ್ತಿ ಕಂಡು ನನ್ನ ಮಾತೇ ಹೊರಡದಂತಾಯಿತು, ಜಂಗಮಮೂರ್ತಿಯನ್ನೇ ನೋಡುವಂತಹ ನೋಟ ನನ್ನದಾಯಿತು, ನನ್ನಲ್ಲಿದ್ದ ಮಾಯೆಯಲ್ಲವೂ ನಾಶವಾಯಿತು ಜಂಗಮಮೂರ್ತಿಯ ಒಡನಾಟದಿಂದ, ಕಲಿದೇವರ ಪ್ರಸಾದದಿಂದ ನನ್ನ ದೇಹವೆಲ್ಲವೂ ಶುದ್ಧಿಯಾಯಿತು, ಕಲಿದೇವರು ಬಸವಣ್ಣನನ್ನು ತೋರಿಸಿದ ಕಾರಣ, ಬಸವಣ್ಣನೆಂಬ ಜಂಗಮ ಮೂರ್ತಿಯನ್ನು ಕಂಡ ಕಾರಣ, ಬದುಕಿದೆನು, ನನ್ನ ಪ್ರಾಣವೆಲ್ಲವೂ ಜಂಗಮೂರ್ತಿಯಲ್ಲಿಯೇ ನೆಲೆನಿಂತಿತ್ತು, ಅಂಗಲಿಂಗಸಂಗವೆಲ್ಲ ಬಸವಣ್ಣನಲ್ಲಿಯೇ ಸ್ಥಿರವಾಯಿತು. ಜಂಗಮೂರ್ತಿಯಿಂದ ನನ್ನ ನಡೆಯಲ್ಲಾ ಪರಿಶುದ್ಧವಾಯಿತೆಂದು ವಿಶ್ಲೇಷಿಸುತ್ತಾರೆ. ಬಸವಣ್ಣನವರ ಇಷ್ಟದೈವ ಕೂಡಲಸಂಗಮನ ಮಹಿಮೆ ಮತ್ತು ಮಹತ್ವವನ್ನೂ ಮಾಚಯ್ಯನವರು ವಚನಭಾಗದಲ್ಲಿ ವಿವರಿಸುವ ಪ್ರಯತ್ನಮಾಡಿದ್ದಾರೆ. ಆ ಮೂಲಕ ಜನತೆಗೆ ಉಪದೇಶವನ್ನು ನೀಡುತ್ತಾರೆ "ನೀರಿನಂತೆ ಶೈತ್ಯದ ಗುಣವನ್ನು ಹೊಂದಿರಬೇಕು, ಸೂರ್ಯನಂತೆ ಸರ್ವರಲ್ಲಿಯೂ ಪ್ರಕಾಶಮಾನತೆಯನ್ನು ಹೊರಸೂಸುತ್ತಿರಬೇಕು, ಭೂಮಿಯು ಎಲ್ಲರ ಭಾರವನ್ನು ತಾಳಿಕೊಳ್ಳುವಂತೆ, ತಾಳ್ಮೆಯ ಗುಣವನ್ನು ಅಳವಡಿಸಿ ಕೊಳ್ಳಬೇಕು ಈ ಮೂರು ಗುಣಗಳು ಮಹತ್ತಾದ ಕೂಡಲಸಂಗಮನಿಗಿದೆ. ಇಂತಹ ಕೂಡಲಸಂಗಮದೇವನನ್ನೂ ಏನೆಂದು ತಾನೆ ವರ್ಣಿಸಲಿ, ಹೊಗಳಲಿ. ಬಸವಣ್ಣನನ್ನು ಕುರಿತಂತೆ ಮಾಚಯ್ಯನವರು 'ಶಬ್ದಚಿತ್ರ'ವನ್ನು ಕಟ್ಟಿಕೊಡುವ ವಚನವೊಂದನ್ನು ರಚಿಸಿದ್ದಾರೆ. 'ತನ್ನನ್ನು ಹೆತ್ತ ತಂದೆ ಬಸವಣ್ಣ'ನೆಂದು ಮನದುಂಬಿ ವರ್ಣಿಸುತ್ತಾರೆ, ಅಲ್ಲದೇ ಬಸವಣ್ಣನವರ ಪ್ರಸಾದದಿಂದ ಬದುಕಿದ್ದೇನೆಂದು

ಧನ್ಯತಾ ಭಾವನ್ನು ವ್ಯಕ್ತಪಡಿಸುತ್ತಾರೆ. ಆದಿಯುಗದಲ್ಲಿ ಮಾಯಾಂಗನೆಯೊಬ್ಬಳು ಹಲವು ಬಣ್ಣಬಣ್ಣದ ಬಟ್ಟೆಯನ್ನುಟ್ಟುಕೊಂಡು ತನ್ನಲ್ಲಿರುವ ದೊಡ್ಡ ಕುಕ್ಕೆ (ಗೂಡೆ)ಯ ತುಂಬಾ ದೇವರನ್ನು ಹೊತ್ತುಕೊಂಡು ಓ! ದೇವರ ಕೊಳ್ಳಿರಿ! ಎಂದು ಮಾರುತ್ತಾ ಬರುತ್ತಾಳೆ. ಆ ದೇವರನ್ನು ಕೊಂಡು ಕೊಳ್ಳಲು ಯಾರೂ ಮುಂದೆ ಬರುವುದಿಲ್ಲ. ಆ ಸಂದರ್ಭದಲ್ಲಿ ಮಡಿವಾಳ ಮಾಚಯ್ಯನವರು ತಮ್ಮ ಬಳಿ ಇದ್ದ ವಸ್ತ್ರವೊಂದನ್ನು ಆ ಮಾಯಾಂಗನೆಗೆ ಕೊಟ್ಟು ಆ ದೇವರನ್ನು ಕೊಳ್ಳುತ್ತಾರೆ. ಆ ದೇವರೆ ಬಸವಣ್ಣ, ನನ್ನನ್ನು ಎತ್ತ ತಂದೆ ಎನ್ನುವರು. ತಾವು ಕೈಗೊಳ್ಳುತ್ತಿದ್ದ ಕಾಯಕವಾದ ರಜಕವೃತ್ತಿಯಿಂದಲೇ ದೇವರನ್ನು ಕೊಳ್ಳುವಂತಾಯಿತು. ನನ್ನಲ್ಲಿನ ನಿರ್ಮಲ 'ವಸ್ತ್ರ'ವನ್ನು ನೀಡಿ ದೇವರ ಕೊಂಡೆನೆಂಬ ವಿನಿತಾಭಾವ ಮಾಚಯ್ಯನವರಲ್ಲಿ ತುಂಬಿ ತುಳುಕಿದೆ. ಅಲ್ಲದೇ ಔದ್ಯೋಗಿಕ ತತ್ತ್ವವನ್ನಿಲ್ಲಿ ಕಾಣಬಹುದಾಗಿದೆ.

> "ಆದಿ ಯುಗದಲ್ಲೊಬ್ಬಳು ಮಾಯಾಂಗನೆ
> ಹಲವು ಬಣ್ಣದ ವಸ್ತ್ರವನ್ನುಟ್ಟುಕೊಂಡು
> ಹೆಡಿಗೆ ತುಂಬ ದೇವರ ಹೊತ್ತುಕೊಂಡು
> ಓ ದೇವರ ಕೊಳ್ಳಿರಯ್ಯಾ, ಓ ದೇವರ ಕೊಳ್ಳಿರಯ್ಯಾ ಎಂದಳು
> ಎಂದಡೆ ಆ ದೇವರನಾರೂ ಕೊಂಬವರಿಲ್ಲ.
> ನಾನು ಒಂದರಿವೆಯ ಕೊಟ್ಟು, ಆ ದೇವರ ಕೊಂಡು,
> ಎನ್ನ ಹೆತ್ತತಂದೆ ಬಸವಣ್ಣನ ಪ್ರಸಾದದಿಂದ
> ಬದುಕಿದೆನು ಕಾಣಾ, ಕಲಿದೇವರದೇವಾ" [9]

ಬಸವಣ್ಣನವರ ವ್ಯಕ್ತಿ–ವ್ಯಕ್ತಿತ್ವ ಸಾರ್ವಕಾಲಿಕವಾದುದು, ಸರ್ವಮಯವಾದುದು, ಸತ್ಯರು, ನಿತ್ಯರು, ಸದ್ಯೋನ್ಮುಕ್ತರು, ನಿಜೈಕ್ಯರು, ಸರ್ವ ಮಹಿಮಾವಂತನಾದ ಬಸವಣ್ಣನವರನ್ನೂ ಕೊಂಡಾಡುತ್ತಾರೆ. ಇಂದ್ರಲೋಕದವರೆಲ್ಲರೂ ಸಹೇಂದ್ರನಾಥನೇ ಬಸವಣ್ಣ ಎಂದು ಹೊಳಗುತ್ತಿರುವರು, ಬ್ರಹ್ಮಲೋದವರೆಲ್ಲರೂ ಪರಬ್ರಹ್ಮಸ್ವರೂಪಿಯೇ ಬಸವಣ್ಣಾ ಎಂದು ಹೊಗಳುತ್ತಿರುವವರು, ವಿಷ್ಣು ಲೋಕದವರೆಲ್ಲರೂ ಹರಿದಂಡನಾಥನೆಂದೂ, ರುದ್ರನ ಲೋಕದವರೆಲ್ಲರೂ ಮಹಾರುದ್ರಸ್ವರೂಪಿ ಬಸವಣ್ಣನೆಂದೂ, ಶಿವಲೋಕದವರೆಲ್ಲರೂ ಪರಶಿವನ ಸ್ವರೂಪಿಯೇ ಬಸವಣ್ಣನೆಂದೂ, ಪ್ರಮಥಲೋಕದವರೆಲ್ಲರೂ ಪ್ರಮಥನಾಥನೇ ಬಸವಣ್ಣನೆಂದೂ, ಪರಲೋಕದವರೆಲ್ಲರೂ ಪರಾಪರನೇ ಬಸವಣ್ಣ, ಸತ್ಯಲೋಕದವರೆಲ್ಲರೂ ನಿತ್ಯ – ಸತ್ಯ ಬಸವಣ್ಣಾ ಎಂದೂ, ಮರ್ತ್ಯ ಲೋಕದವರೆಲ್ಲರೂ ಕರ್ತಾರನೇ ಬಸವಣ್ಣನೆಂದೂ, ಪಾತಾಳಲೋಕದವರೆಲ್ಲರೂ ಪ್ರಮಾಣಕ್ಕೆ ನಿಲುಕದಿರುವ ವ್ಯಕ್ತಿ ಬಸವಣ್ಣನೆಂದೂ, ರಸಾತಳ ಲೋಕದವರೆಲ್ಲರೂ ಮಹಾಮಹಿಮನೇ ಬಸವಣ್ಣಾ, ಶೂನ್ಯಲೋಕದವರೆಲ್ಲರೂ ಶೂನ್ಯ ಲಿಂಗಾಕೃತಿಯೇ ಬಸವಣ್ಣನಾಗಿದ್ದಾನೆಂದೂ, ಸರ್ವಲೋಕದಲ್ಲಿರುವವರೆಲ್ಲರೂ ಸರ್ವಾಧಾರನೂ, ಜಗದ ಪ್ರತಿಯೊಂದು ಚರಾಚರಾ ಜೀವಿ ಜಂತುಗಳ

ಪ್ರತಿ ಚಲನಕ್ಕೂ ಅಸ್ತಿತ್ವಕ್ಕೂ ಬಸವಣ್ಣನೇ ಮೂಲ ಕಾರಣಕರ್ತನಾಗಿದ್ದಾನೆ. ಬಸವಣ್ಣನೇ ಎಲ್ಲದಕ್ಕೂ ಮೂಲಾಧಾರವೆಂದು ಹೊಗಳುತ್ತಿದ್ದಾರೆ. ಇದಕ್ಕಿಂತಲೂ ಮಹೋನ್ನತವಾದ ಬಸವಣ್ಣನ ಚಿತ್ರಣಕ್ಕೆ ಕೈಗನ್ನಡಿಯಂತಿರುವ ವಚನವಿರಲಾರದೆಂದೆನಿಸುತ್ತದೆ. ಸರ್ವ ಘನಸ್ವರೂಪಿ, ಸರ್ವಪರಿಪೂರ್ಣಮಯನಾದ ಬಸವಣ್ಣನನ್ನು, ಕಲಿದೇವರ ಶರಣನಾದ ಬಸವಣ್ಣನನ್ನು ಘನಮಹಿಮನನ್ನೂ ನಮಿಸುವೆನೆನ್ನುತ್ತಾರೆ ಮಾಚಯ್ಯನವರು

"ಇಂದ್ರಲೋಕದವರೆಲ್ಲರೂ
ಸಹೀಂದ್ರನಾಥ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಬ್ರಹ್ಮಲೋಕದವರೆಲ್ಲರೂ
ಪರಬ್ರಹ್ಮ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ವಿಷ್ಣುಲೋಕದವರೆಲ್ಲರೂ ಹರಿದಂಡನಾಥ ಬಸವಣ್ಣಾ
ಎಂದು ಹೊಗಳುತಿರ್ಪರಯ್ಯಾ
ರುದ್ರಲೋಕದವರೆಲ್ಲರೂ
ಮಹಾರುದ್ರ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಶಿವಲೋಕದವರೆಲ್ಲರೂ
ಪರಶಿವ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಪ್ರಥಮಲೋಕದವರೆಲ್ಲರೂ
ಪ್ರಮಥನಾಥ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಪರಲೋಕದವರೆಲ್ಲರೂ
ಪರಾಪರ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಸತ್ಯಲೋಕದವರೆಲ್ಲರೂ
ನಿತ್ಯ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಮರ್ತ್ಯಲೋಕದವರೆಲ್ಲರೂ
ಕರ್ತಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ನಾಗಲೋಕದವರೆಲ್ಲರೂ

ನಾಗನಾಥ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಪಾತಾಳಲೋಕದವರೆಲ್ಲರೂ
ಅಪ್ರಮಾಣ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ರಸಾತಳಲೋಕದವರೆಲ್ಲರೂ
ಮಹಾಮಹಿಮ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಶೂನ್ಯಲೋಕದವರೆಲ್ಲರೂ
ಶೂನ್ಯಲಿಂಗ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಸರ್ವಲೋಕದವರೆಲ್ಲರೂ
ಸರ್ವಾಧಾರ ಬಸವಣ್ಣಾ ಎಂದು ಹೊಗಳುತಿರ್ಪರಯ್ಯಾ
ಇಂತು, ನಿತ್ಯರು ನಿಜೈಕ್ಯರು ಬಸವಣ್ಣನ ನೆನೆಯದವರಾರು?
ಸತ್ಯರು ಸದ್ಯೋನ್ಮುಕ್ತರು ಬಸವಣ್ಣನ ಹೊಗಳದವರಾರು?
ಸರ್ವಮಹಿಮನೆ, ಸರ್ವಘನಮನವೇದ್ಯನೆ, ಸರ್ವಪರಿಪೂರ್ಣನೆ
ಕಲಿದೇವಾ, ನಿಮ್ಮ ಶರಣ ಬಸವಣ್ಣನಂತಹ ಘನಮಹಿಮನೋಡಯ್ಯಾ" [10]

ಶರಣಧರ್ಮದ ನಿಜಸಂಪತ್ತಿನಂತಿರುವ ಬಸವಣ್ಣನವರ ಘನತೆಯನ್ನು ಸವಿಸ್ತಾರವಾಗಿ ಪದಗಳಿಗೂ ನಿಲುಕದಂತಹ ರೀತಿಯಲ್ಲಿ ವರ್ಣಿಸಿದ ಮಾಚಯ್ಯನವರು, ಬಸವಣ್ಣನವರ ಅಂತ್ಯವನ್ನು ಕುರಿತು ಚರಮಗೀತೆಯಂತಹ, ಶೋಕಗೀತೆಯಂತಿರುವ ಕೆಲವು ವಚನಗಳನ್ನು ಬಸವಣ್ಣನವರ ಕಾಲಾನಂತರ ರಚಿಸಿರುವುದು ಅವರ ವಚನಗಳ ಅಭ್ಯಾಸದಿಂದ ತಿಳಿದು ಬರುತ್ತದೆ. ಈ ವಚನಗಳನ್ನು ಗಮನಿಸಿದರೆ ಮಾಚಯ್ಯನವರಿಗಿಂತಲೂ ಮುಂಚೆ ಬಸವಣ್ಣನವರು ಲಿಂಗೈಕ್ಯರಾದರೆಂದು ತಿಳಿಯುತ್ತದೆ. "ನಿರ್ವಾಹವಾಯಿತ್ತು ಬಸವಣ್ಣಂಗೆ ಕಪ್ಪಡಿಯ ಸಂಗಯ್ಯನಲ್ಲಿ" ಎನ್ನುವ ವಚನದ ಸಾಲುಗಳು ಬಸವಣ್ಣನವರು ಕಪ್ಪಡಿಯ ಸಂಗಮದಲ್ಲಿ ಮುಕ್ತಿ ಹೊಂದಿದರೆನ್ನುವ ವಿಚಾರ ಸಮಕಾಲೀನ ವಚನಕಾರರಾದ ಮಾಚಯ್ಯನವರಿಂದ ಉಲ್ಲೇಖಿತವಾಗಿದೆ. ಬಸವಣ್ಣನವರ ಲಿಂಗೈಕ್ಯದೊಂದಿಗೆ ಏಳುನೂರ ಎಪ್ಪತ್ತು ಅಮರಗಣಂಗಳ ದಂಡು ಮರಳಿ ಕೈಲಾಸಪುರದತ್ತ ನಡೆದರು. ಅನುಭವಮಂಟಪದಲ್ಲಿದ್ದು, ಬಸವಣ್ಣನವರ ವೈಚಾರಿಕ ಕ್ರಾಂತಿಗೆ ಬೆನ್ನೆಲುಬಾಗಿದ್ದು, ವಚನ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಅಕ್ಕ ನಾಗಮ್ಮ, ಮೆರೆಮಿಂಡದೇವ, ಮಲ್ಲಿನಾಥ, ಹಡಪದ ಅಪ್ಪಣ್ಣ, ಮೊಗವಾಡದ ಕೇಶಿರಾಜ, ಕೋಲಶಾಂತಯ್ಯ, ಪ್ರಭುದೇವರು, ಮೋಳಿಗೆಮಾರಯ್ಯ, ಡೋಹರ ಕಕ್ಕಯ್ಯ, ಪಡಿಹಾರಿ ಉತ್ತಣ್ಣ, ಕನ್ನದಮಾರಣ್ಣ, ಕಲಕೇತ ಬೊಮ್ಮಣ್ಣ, ನುಲಿಯ ಚಂದಯ್ಯ, ಹೆಂಡದ ಮಾರಯ್ಯ, ಶಂಕರ ದಾಸಿಮಯ್ಯ, ಏಕಾಂತ ರಾಮಯ್ಯ, ಮೇದರ ಕೇತಯ್ಯ ಮೊದಲಾದ ಏಳ್ನೂರ

ಎಪ್ಪತ್ತು ಶಿವಶರಣರೆಲ್ಲರೂ ತಾವು ಬಂದ ಕೆಲಸ ಮುಗಿಸಿ, ಪುರಾತನರಾದ ಶಿವಶರಣರು ನನ್ನ ಮನಸ್ಸಿನ ಮೈಲಿಗೆಯನ್ನು ನಾಶಮಾಡಿ, ಅಂತರಂಗವನ್ನು ನಿರ್ಮಲಗೊಳಿಸಿ ಪವಿತ್ರವನ್ನಾಗಿಸಿ, ಎಲ್ಲಾ ಶಿವಗಣಗಳು ಬಸವಣ್ಣನವರ ಬಯಲು ಪ್ರಸಾದವನ್ನು ಬೆರೆಸಿ, ಬಸವತತ್ತ್ವ, ಶಿವತತ್ತ್ವವನ್ನೂ ಕೂಡಿಕೊಂಡರು. ಇವರೆಲ್ಲರೂ ಸ್ವೀಕರಿಸಿ ಉಳಿದ ಶ್ರೇಷ್ಠವಾದ ಬಯಲು ಪ್ರಸಾದವು ನನಗೆ ಪ್ರಾಪ್ತವಾಯಿತು ಕಲಿದೇವರ ದೇವಯ್ಯ ಎಂದು ಶ್ರೇಷ್ಠರೂ ಮಹಾತ್ಮರೂ ಆದ, ಪೂಜ್ಯರೂ, ಪುರಾನತರೂ ಆದ ಬಸವಾದಿ ಶಿವಶರಣರ ಲಿಂಗೈಕ್ಯವನ್ನೂ, ಮುಕ್ತಿಯನ್ನೂ, ಮಾಚಯ್ಯನವರು ವಿವರಿಸುತ್ತಾರೆ.

'ಆಕಾರ ನಿರಾಕಾರವಾದಂತೆ, ಪ್ರಾಣವು ನಿಃಪ್ರಾಣವಾದಂತೆ, ಅಂಗಜಂಗಮದ ಮಾಯೆ ಸಮಾಪ್ತಿಯಾದಂತೆ, ನಿಃಶಬ್ದವೇದ್ಯವಾದಂತೆ, ಕಲಿದೇವರ ದೇವನ ಹೃದಯ ಕಮಲವನ್ನೂ ಪ್ರವೇಶಿಸಿ ದೇವರಿಗೆ ದೇವರಾಗಿ ಸಂಗನಲ್ಲಿ ಬಸವಣ್ಣನವರು ಒಂದಾಗುತ್ತಾರೆ' ಎನ್ನುವ ಚರಮಗೀತೆಯು ಮಾಚಯ್ಯನವರಲ್ಲಿ ಕಂಡುಬರುತ್ತವೆ.

"ಆಕಾರ ನಿರಾಕಾರವಾಯಿತ್ತಲ್ಲಾ ಬಸವಣ್ಣ
ಪ್ರಾಣ ನಿಃಪ್ರಾಣವಾಯಿತ್ತಲ್ಲಾ ಬಸವಣ್ಣ
ಅಂಗಜಂಗಮದ ಮಾಟ ಸಮಾಪ್ತಿಯಾಯಿತ್ತಲ್ಲಾ ಬಸವಣ್ಣ
ಕಲಿದೇವರ ದೇವನ ಹೃದಯಕಮಲವ ಹೊಕ್ಕು
ದೇವರಿಗೆ ದೇವನಾಗಿ ಹೋದೆಯಲ್ಲಾ ಸಂಗನಬಸವಣ್ಣ" [11]

ಒಟ್ಟಂದದಲ್ಲಿ ಮಾಚಯ್ಯನವರ ದೇಹದ ತುಂಬೆಲ್ಲಾ ವ್ಯಾಪಿಸಿಕೊಂಡಿರುವ ಪಾರಾಯಣ ಸಂಸ್ಕೃತಿಯನ್ನು ವಿರೋಧಿಸಿ, ಮಾನವೀಯ ಮೌಲ್ಯಗಳಿಗಾಗಿ ದುಡಿದು ಸರ್ವಶ್ರೇಷ್ಠರೆನಿಸಿ, 'ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ' ಮಹಾಪುರುಷ ಬಸವಣ್ಣನವರನ್ನೂ ಕುರಿತಂತೆ ತೊಂಬತ್ತಕ್ಕು ಹೆಚ್ಚಿನ ವಚನಗಳಲ್ಲಿ ವಿಶ್ಲೇಷಿಸಿ, ಚಿತ್ರಿಸುವ ಪ್ರಯತ್ನವನ್ನಿಲ್ಲಿ ಕಾಣಬಹುದು. "ಸಮಾಜವನ್ನು ಎಲ್ಲ ರೀತಿಯಿಂದಲೂ ಮಾನವೀಯಗೊಳಿಸಿ ವಿಶ್ವಕ್ಕೆ ಒಬ್ಬನೇ ದೇವರೆಂದು ನಂಬಿದ, ಜಾತಿ, ಭೇದ, ಲಿಂಗ ಭೇದವನ್ನೂ ವಿರೋಧಿಸಿದವರು ಬಸವಣ್ಣ ಬಸವ ಪ್ರಜ್ಞೆ ಎಂದರೆ, ಕೇಡಿಲ್ಲದೆ, ಸುಲಿಗೆಯಿಲ್ಲದ ಸಮ ಸಮಾಜ ಕಟ್ಟುವುದು. ಎಲ್ಲ ಸಂಸ್ಕೃತಿ, ನಾಗರೀಕತೆ ಮತ್ತು ಧರ್ಮಗಳ ವಿಚಾರಧಾರೆಗಳಲ್ಲಿನ ವೈವಿಧ್ಯದಲ್ಲಿ ಏಕತೆಯನ್ನು ಹುಡುಕುವ ಪ್ರಜಾಪ್ರಭುತ್ವವಾದಿ ಪ್ರಜ್ಞೆಯೇ ಬಸವಣ್ಣನವರದ್ದಾಗಿತ್ತು"[12] ಎನ್ನುವ ನಿಲುವನ್ನು ಗ್ರಹಿಸಬಹುದಾಗಿದೆ.

**ಅಧ್ಯಾಯ – 4ರ ಅಡಿ ಟಿಪ್ಪಣಿಗಳು :–**

1. ಎಂ. ಆರ್. ಶ್ರೀನಿವಾಸಮೂರ್ತಿ, ವಚನಧರ್ಮಸಾರ, ಪುಟ 1
2. ಡಾ. ಎಲ್. ಬಸವರಾಜು, ಬಸವಣ್ಣನವರ ವಚನಗಳು, ಪುಟ 103
3. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 281
4. ಅದೇ., ಪುಟ 201
5. ಡಾ. ಎಸ್. ಶಿವರಾಜಪ್ಪ, ಮಡಿವಾಳ ಮಾಚಿದೇವ, ಪುಟ 21
6. ಅದೇ., ಪುಟ 23
7. ಡಾ. ಬಿ. ಆರ್. ಹಿರೇಮಠ, ಸಂಕೀರ್ಣ ವಚನ ಸಂಪುಟ 3, ಪುಟ 282
8. ಅದೇ., ಪುಟ 255
9. ಅದೇ., ಪುಟ 193
10. ಅದೇ., ಪುಟ 195
11. ಅದೇ., ಪುಟ 188
12. ಡಾ. ಎಚ್. ಟಿ. ಪೋತೆ, ಶರಣ ಸಂಸ್ಕೃತಿ ಮತ್ತು..., ಪುಟ 2

# ಅಧ್ಯಾಯ – 5

# "ಶಿವಶರಣರು ಕಂಡಂತೆ ಮಡಿವಾಳ ಮಾಚಿದೇವರು"

ಹನ್ನೆರಡನೆಯ ಶತಮಾನದಲ್ಲಿ ಚಾಲುಕ್ಯರ ರಾಜಧಾನಿಯಾದ ಕಲ್ಯಾಣಪಟ್ಟಣವು ಜಗತ್ತಿನ ಶ್ರೇಷ್ಠನಗರಗಳಲ್ಲಿ ಒಂದಾಗಿತ್ತು. ಯಾವುದೇ ಪ್ರಚಾರ ಮಾಧ್ಯಮಗಳು, ಸಂಪರ್ಕಸಾಧನಗಳು ಇಲ್ಲದೇ ಇರುವ ಕಾಲಘಟ್ಟದಲ್ಲಿ ಶರಣರ ಆಂದೋಲನದ ಕೀರ್ತಿವಾರ್ತೆಯು ಇಡೀ ಭರತಖಂಡದ ದಿಕ್ಕು ದಿಕ್ಕುಗಳಿಗೂ ವ್ಯಾಪಿಸಿತ್ತು. ಕಲ್ಯಾಣಪಟ್ಟಣದ ಕಡೆಗೆ ಜನರೆಲ್ಲರೂ ಧಾವಿಸತೊಡಗಿದರು. ರಾಜ–ಮಹಾರಾಜರು, ಸಿರಿವಂತರು, ವಿದ್ವಾಂಸರು, ನಾನಾ ವೃತ್ತಿಯವರು, ಕೆಳವರ್ಗ – ಮೇಲ್ವರ್ಗದವರೆಲ್ಲರೂ ಕಲ್ಯಾಣಕ್ಕೆ ಬಂದು ಶರಣ ಸಂಸ್ಕೃತಿಗೆ ಒಗ್ಗಿಕೊಂಡರು. ಅಧ್ಯಾತ್ಮ ಶಾಲೆಯಂತಿದ್ದ ಶಿವಾನುಭವ ಮಂಟಪದ ಪೀಠಾಧ್ಯಕ್ಷರಾಗಿದ್ದ ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮ, ಮಾಚಯ್ಯ ಮುಂತಾದ ಶಿವಶರಣರೆಲ್ಲರೂ ಅನುಭವ ಮಂಟಪದಲ್ಲಿ ಕಲೆತು ಆಚಾರ – ವಿಚಾರಗಳನ್ನು ಕುರಿತು ಚರ್ಚಿಸುತ್ತಿದ್ದರು. ಅನುಭವಮಂಟಪದ ಪ್ರಭಾವಕ್ಕೆ ಒಳಗಾಗಿ ಆ ಕಾಲದ ಸವಾಲಕ್ಷ, ಕಾಂಬೋಜ, ಕುಂತಳ, ಗೊಲ್ಲ, ಲಾಳ, ಬರ್ಬರ, ಕಳಿಂಗ, ಗುರ್ಜರರ ಮೊದಲಾದ ರಾಜ್ಯಗಳಿಂದ ಜನರು ಕಲ್ಯಾಣದೆಡೆಗೆ ಆಗಮಿಸತೊಡಗಿದರು. ಸವಾಲಕ್ಷದಿಂದ (ಕಾಶ್ಮೀರ) ಮಹಾದೇವ ಭೂಪಾಲ ಮತ್ತು ರಾಣಿ ಮಹಾದೇವಿ, ಸೌರಾಷ್ಟ್ರದಿಂದ ಆದಯ್ಯ, ಸೊಡ್ಡಳ ಬಾಚರಸ, ಬರ್ಬರದಿಂದ (ಬಲೂಚಿಸ್ಥಾನ) ಮರುಳಶಂಕರದೇವ, ಗುರ್ಜರದಿಂದ ಸುರಗಿ ಚೌಡಯ್ಯ, ಕುಂತಳದಿಂದ ಏಕಾಂತರಾಮಯ್ಯ, ಮಾಳವದಿಂದ ಡೋಹರಕಕ್ಕಯ್ಯ, ಕಳಿಂಗ (ಒರಿಸ್ಸಾ)ದಿಂದ ಮಹಾದೇವ ಶೆಟ್ಟಿ, ಕುರಿಕೆಯ ರಾಜ ಸಕಲೇಶ ಮಾದರಸ, ಐಹೊಳೆಯ ರಾಜ ಮಲ್ಲರಸ, ಕೆಂಬಾವಿಯ ರಾಜ ಚಂದಿಮರಸ, ಆಂಧ್ರದಿಂದ ಮೈದುನ ರಾಮಯ್ಯ ಮೊದಲಾದವರೆಲ್ಲರೂ ಕರ್ನಾಟಕದ ಕಲ್ಯಾಣದತ್ತ ಹೆಜ್ಜೆ ಹಾಕಿದರು ಅನುಭವಮಂಟಪದ ಚರ್ಚಾ ಗೋಷ್ಠಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು.

ವಚನ ಸಾಹಿತ್ಯದಲ್ಲಿನ 'ಲಕ್ಷದ ಮೇಲೆ ತೊಂಬತ್ತಾರು ಸಾವಿರ', 'ಅಸಂಖ್ಯಾತ ಗಣಂಗಳು' ಮೊದಲಾದ ಮಾತುಗಳು ಅಂದು ಕಲ್ಯಾಣಪಟ್ಟಣದಲ್ಲಿ, ಸಮಾವೇಶಗೊಂಡಿದ್ದ ಶರಣ ಸಂಖ್ಯೆ ಅಪರಿಮಿತವಾಗಿತ್ತೆಂಬುದನ್ನು ಸೂಚಿಸುತ್ತದೆ. ವಿವಿಧ ಕಾಯಕದ ಕಲಿಗಳಾದ ಶರಣರು ತಮ್ಮ ವೃತ್ತಿಪರ ಪದಗಳನ್ನು ಬಳಸಿ, ತಮ್ಮ ಲೋಕಾನುಭವ ಹಾಗೂ ಅನುಭಾವಗಳನ್ನು ವ್ಯಕ್ತಪಡಿಸಿದ್ದಾರೆ ಇಂತಹ 'ಕಲಿಶರಣ'ರಲ್ಲಿ ಶ್ರೇಷ್ಠರಾದವರು ಮಡಿವಾಳ ಮಾಚಿದೇವರು. ಸಮಕಾಲೀನ ಶರಣರು ಮಾಚಯ್ಯನವರನ್ನು, ಅವರ ಅನುಭಾವದ ನೆಲೆಯನ್ನು, ಕಾಯಕ ತತ್ವವನ್ನು, ವ್ಯಕ್ತಿ – ವ್ಯಕ್ತಿತ್ವವನ್ನೂ ಸಾಮಾಜಿಕ ಚಿಂತನೆಯನ್ನೂ, ಅಂತರಂಗ – ಬಹಿರಂಗವನ್ನೂ, ಶರಣತ್ವದ ಮಹಿಮೆಯನ್ನು ತಮ್ಮ ಹಲವಾರು ವಚನಗಳಲ್ಲಿ ಹಾಡಿ ಹೊಗಳಿ ವರ್ಣಿಸಿದ್ದಾರೆ. 'ಸಾವಿರಕ್ಕೊಬ್ಬ

ಸತ್ಯವಂತ. ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ' ಎನ್ನುವ ಶರಣ ಚನ್ನಬಸವಣ್ಣನವರ ಮಾತೊಂದಿದೆ. ಅಂತಹ ಕೋಟಿಗೊಬ್ಬ ಶರಣರಲ್ಲಿ ಅಗ್ರಪಂಕ್ತಿಯನ್ನಲಂಕರಿಸಿದವರಲ್ಲಿ ಬಸವರಾಜ ಮಾರ್ಗದ ಸೂತ್ರಧಾರಿ ಮಡಿವಾಳ ಮಾಚಿ ತಂದೆಯವರು ಪ್ರಮುಖರು. ಮಾಚಿದೇವರನ್ನು ಕುರಿತು ಸಮಕಾಲೀನ ಶರಣರಾದ ಅಲ್ಲಮಪ್ರಭುಗಳು, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿಯಂತಹವರು ವಚನಗಳಲ್ಲಿ ವ್ಯಕ್ತಿ – ವಿಶೇಷತೆಯನ್ನು ವರ್ಣಿಸಿದ್ದಾರೆ. ಬಸವಾದಿ ಪ್ರಥಮರು ಬಹುಬೇಗನೆ ಮಡಿವಾಳ ಮಾಚಯ್ಯನವರ ಮಹೋನ್ನತಿಯನ್ನು ಗುರುತಿಸುತ್ತಾರೆ. 'ನಾ ಮುಂದೆ, ನೀ ಮುಂದೆ' ಎಂದು ಮಾಚಯ್ಯರನ್ನು ಕೊಂಡಾಡುತ್ತಾರೆ. ಮಾಚಯ್ಯನವರ ಕಾಯಕನಿಷ್ಠೆ, ನಿರಹಂಕಾರತೆ, ಸರಳತೆಗಳನ್ನು ಎಲ್ಲಾ ಶಿವಶರಣರು ಸಹ ಮನಸಾರೆ ಮೆಚ್ಚಿದ್ದರು.

**ಅಲ್ಲಮಪ್ರಭು :–**

ಅಲ್ಲಮಪ್ರಭುಗಳು ಮಡಿವಾಳ ಮಾಚಿದೇವರನ್ನು ಕುರಿತು, ಅನುಭವವನ್ನು ಪ್ರವೇಶಿಸಿದ ಸಂದರ್ಭದಲ್ಲಿ 'ಕತ್ತಲೆಯೊಳಗೆ ರವಿಯ ಬೆಳಗು ಹೊಕ್ಕಂತಾಯಿತ್ತು ಗುಹೇಶ್ವರನ ಶರಣ ಮಡಿವಾಳ ಮಾಚಿ ತಂದೆಯ ಕೃಪೆಯಿಂದ' ಎಂದು ಹೊಗಳುತ್ತಾ, ಬಸವಣ್ಣ ಮತ್ತು ಮಡಿವಾಳನನ್ನು ಒಂದೇ ಎಂದು ಕೊಂಡಾಡುತ್ತಾರೆ. 'ಮಡಿವಾಳನ ಪ್ರಸಾದದಿಂದ ನಿಮ್ಮ ಘನವರಿದು ಬದುಕಿದೆನು' ಎನ್ನುತ್ತಾರೆ. 'ನನ್ನ ಪೂರ್ವಾಪರದ ಅರಿವು ನನಗೆ ಮಹಾಜ್ಞಾನಿಗಳ ಸಂಗದಿಂದ ಉಭಯಸಂಗ ಸಿದ್ಧಿಗಳಾದ ಬಸವಣ್ಣ ಮತ್ತು ಮಡಿವಾಳನಿಂದ ದಿಟವಾಯಿತ್ತು ಗುಹೇಶ್ವರನ ಶರಣಾದ ಮಡಿವಾಳನ ಪಾದಕ್ಕೆ ನಮೋ ನಮೋ ಎನ್ನುತ್ತಿದ್ದೆನು" ಎಂದು ಮುಕ್ತಕಂಠದಿಂದ ಹೊಗಳಿ ಗೌರವವನ್ನು ಸೂಚಿಸುತ್ತಾರೆ.

"ಆದಿಯ ಕಂಡೆ, ಅನಾದಿಯ ಕಂಡೆ
ಘನವ ಕಂಡೆ, ಮನವ ಕಂಡೆ
ಆಯತ ಸ್ವಾಯತ ಸನ್ನಿಹಿತವ ಕಂಡೆ ಗೋಗೇಶ್ವರ
ಲಿಂಗದಲ್ಲಿ ಬಸವಣ್ಣನ ಕೃಪೆಯಿಂದ ಕಂಡೆನು
ಕಾಣಾ ಮಡಿವಾಳಮಾಚಯ್ಯ
ಪಾರಿಕಲ್ಲ ಪುತ್ಥಳಿಯ ಅಪ್ಪುಕೊಂಡಂತಾಯಿತ್ತು
ಅಗ್ನಿಪುರುಷನ ಮುಸುಕ ತೆಗೆದ ಕರ್ಪೂರದಂತಾಯಿತ್ತು
ಕತ್ತಲೆಯೊಳಗೆ ರವಿಯ ಬೆಳಗು ಹೊಕ್ಕಂತಾಯಿತ್ತು
ಗುಹೇಶ್ವರನ ಶರಣ ಮಡಿವಾಳ ಮಾಚಿತಂದೆಯ ಕೃಪೆಯಿಂದ
ಬಸವಣ್ಣಾ ನಿನ್ನ ಕಂಡೆನು
ನಿನ್ನನೂ ಮಡಿವಾಳನನು ನೀನೆಂದ ಕಂಡೆನಯ್ಯಾ "[1]

ಆ ಸ್ವಯಂ ಜ್ಯೋತಿಯ ನಿಜ ನಿವಾಸದಲ್ಲಿ ನಿಶ್ಚಿಂತನಾಗಿದ್ದು ಮಡಿವಾಳಯ್ಯನ ಕೃಪೆಯಿಂದ ನಾನೂ ಬದುಕಿದೆನು ಕಾಣಾ ಗೋಗೇಶ್ವರ ಎಂದು ಹೊಗಳಿದ್ದಾರೆ. ಅಲ್ಲಮಪ್ರಭುಗಳು, "ನನ್ನ ದೇಹವೇ ಬಸವಣ್ಣ, ನನ್ನ ಮನಸ್ಸೇ ಮಡಿವಾಳಯ್ಯ, ನನ್ನ ಪ್ರಾಣವೇ ಚೆನ್ನಬಸವಣ್ಣ ಇಂತಹ ಶರಣರ ಶ್ರೇಷ್ಠತೆಯನ್ನು ನನ್ನ ಸರ್ವಾಂಗದಲ್ಲೂ ಕಂಡು ಪರಮಸುಖಿಯಾದೆನು" ಎಂದು ತಮ್ಮ ವಚನವೊಂದರಲ್ಲಿ ಕೊಂಡಾಡುತ್ತಾರೆ.

**ಬಸವಣ್ಣ :–**

ಇದೇ ಶರಣಧರ್ಮದಲ್ಲಿ ತನಗೊಂದು ಯೋಗ್ಯತೆ, ಅರ್ಹತೆ ಲಭ್ಯವಾಗಿದ್ದೇ ಆಗಿದ್ದರೆ ಅದು ಶರಣ ಮಡಿವಾಳನಿಂದ ಎಂದು ಬಸವಣ್ಣನವರು ಸ್ತುತಿಸುತ್ತಾರೆ. ನನ್ನ ದೇಹವನ್ನು ಶುದ್ಧಮಾಡಿದವನು ಮಡಿವಾಳ. ನನ್ನ ಮನಸ್ಸನ್ನು ನಿರ್ಮಲ ಮಾಡಿದವನು ಮಡಿವಾಳ, ಅಂತರಂಗ ಬೆಳಗಿಸಿ, ಬಹಿರಂಗವ ಬಿಡಿಸಿದವನು ಮಡಿವಾಳನೆಂದು ಹೊಗಳುತ್ತಾರೆ ಬಸವಣ್ಣ.

"ಎನ್ನಕಾಯವ ಶುದ್ಧ ಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ
ಎನ್ನಂತರಂಗವ ಬೆಳಗಿದಾತ ಮಡಿವಾಳ
ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ
ಕೂಡಲ ಸಂಗಮದೇವಾ ಎನ್ನ ನಿನಗೆ ಯೋಗ್ಯನ
ಮಾಡಿದಾತ ಮಡಿವಾಳ" [2]

ಮುಂದುವರಿದಂತೆ, ಬಸವಣ್ಣನವರು ಮತ್ತೊಂದು ವಚನದ ಭಾಗದಲ್ಲಿ ನನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರು, ಮನದ ಕರಸ್ಥಲದಲ್ಲಿ ಚೆನ್ನಬಸವಣ್ಣನನ್ನು, ಅರಿವಿನ ಕರಸ್ಥಲದಲ್ಲಿ ಮಡಿವಾಳಯ್ಯನನ್ನು ಕಂಡೆನೆಂದು ವರ್ಣಿಸುತ್ತಾರೆ. ಕೋಟಿರುದ್ರರು, ಕೋಟಿಬ್ರಹ್ಮ ವಿಷ್ಣುಗಳು, ನರರು, ದೇವತೆಗಳು, ಗರುಡ ಗಂಧರ್ವರು ಮಾಡಿದ ಮಡಿಯೊಳಗೆ ಮಡಿಯಾಗದೇ ಮಾಚಯ್ಯನೇ ಹೊಸದಾದ ಮಡಿಯು ತಯಾರಿಸಿಕೊಟ್ಟು ನನ್ನನ್ನು ಬದುಕಿಸಿಕೊಂಡವನು ಮಡಿವಾಳನು ಎಂದು ಹೆಮ್ಮೆಯಿಂದ ನುಡಿಯುತ್ತಾರೆ ಬಸವಣ್ಣ.

"ಕೋಟಿ ರುದ್ರರು ಮಡಿದರು
ಅನಂತಕೋಟಿ ಬ್ರಹ್ಮವಿಷ್ಣುಗಳು ಮಡಿದರು
ನರರು, ಸುರರು, ಗರುಡ ಗಂಧರ್ವರು ಮಡಿದರು
ಅವರ ಮಡಿಯೊಳಗೆ ತಾನಾಗದೆ
ತಾನೊಂದು ಹೊಸ ಬಿಳಿದ ಮಡಿಮಾಡಿ
ಎನಗುಡಗೊಟ್ಟು ಎನ್ನ ಬದುಕಿಸಿಕೊಂಡಾತ
ಮಡಿವಾಳ ಕಾಣಾ, ಕೂಡಲಸಂಗಮದೇವಾ" [23]

ಮಾಚಯ್ಯನವರ ಘನತೆ, ವ್ಯಕ್ತಿತ್ವವನ್ನು ಬಸವಣ್ಣನವರು ಹೊಗಳುವ ಸಂದರ್ಭದಲ್ಲಿ ಕೂಡಲಸಂಗನ ಶರಣರಾದ ಮಾಚಿ ತಂದೆಯ ಘನತೆಯನ್ನು ಶ್ರೇಷ್ಠತೆಯನ್ನು ಕೂಡಲಸಂಗಮನೇ ಬಲ್ಲವಂತವನು. ಆತನ ಮಹಿಮೆಯನ್ನು ನನ್ನಿಂದ ಅರಿಯಲು ಅಸಾಧ್ಯವೆಂದು ಉನ್ನತೀಕರಿಸಿ, ಕತ್ತಲೆಯನ್ನು ಜೀವದ ನಿಲುವಿನ ಗೆಲುವನು, ಭಾವದ ಸೂತಕವನ್ನು ಕಳೆಯಲು ಮಡಿವಾಳಯ್ಯನಿಂದ ಮಾತ್ರವೇ ಸಾಧ್ಯವೆಂದು ಬಸವಣ್ಣನವರು ಮನತುಂಬಿ ವರ್ಣಿಸುತ್ತಾರೆ. 'ಮಾಚಯ್ಯ', 'ಮಾಚಿದೇವ' ನೆಂದು ತನ್ನ ಸಮಕಾಲೀನ ಶರಣರಿಂದ ಕರೆಸಿಕೊಳ್ಳುತ್ತಿದ್ದ ಮಡಿವಾಳಯ್ಯನನ್ನು ಭಕ್ತಿಭಂಡಾರಿ ಬಸವಣ್ಣ 'ಮಾಚಿತಂದೆ' ಎಂದು ಉನ್ನತಿಯ ಸ್ಥಾನವನ್ನೂ ನೀಡುತ್ತಾರೆ.

ಎನ್ನ ಕಾಯದ ಕತ್ತಲೆಯ ಕಳೆಯಲರಿಯೆನು

ಎನ್ನ ಜೀವದ ನಿಲವ ಗೆಲಲರಿಯೆನು

ಎನ್ನ ಭಾವದ ಸೂತಕವ ಕಳೆಯಲರಿಯೆನು

ನಾನೆಂತು ಬಲ್ಲೆನಯ್ಯಾ ನಿಮ್ಮ ಘನಮಹಿಮರ ನಿಲವ?

ಕೂಡಲ ಸಂಗಮದೇವಾ

ನಿಮ್ಮ ಶರಣ ಮಡಿವಾಳ ಮಾಚಿತಂದೆಯ

ಘನವ ನೀವೇ ಬಲ್ಲಿರಿ" [4]

ಹಲವಾರು ವಚನಗಳಲ್ಲಿ ಬಸವಣ್ಣನವರು 'ಮಾಚಯ್ಯನವರ ವ್ಯಕ್ತಿತ್ವದ ಅನಾವರಣದ ಸಂದರ್ಭದಲ್ಲಿ ಕೂಡಲ ಸಂಗನ ಶರಣರ ಸೋಂಕಿನಿಂದಾಗಿ ಶುದ್ಧವಾದೆನು ಇದಕ್ಕೆ ಕೂಡಲ ಸಂಗನೇ ಸಾಕ್ಷಿ, ಮಡಿವಾಳ ಮಾಚಿ ತಂದೆಗಳ ಶ್ರೀಪಾದಕ್ಕೆ ನಮೋನಮೋ' ಎನ್ನುತ್ತಿದ್ದೆನು ಎಂದು ಚಿತ್ರಿಸುತ್ತಾರೆ. ಇದರಿಂದಾಗಿ ಮಾಚಯ್ಯನವರ ವ್ಯಕ್ತಿತ್ವ ಯಾವ ರೀತಿ ಬೆಳೆದಿತ್ತೆಂಬುದರ ಅರಿವಾಗುತ್ತದೆ. ಶರಣ ಮೇದರ ಕೇತಯ್ಯನ ಲಿಂಗೈಕ್ಯರ ಸಂದರ್ಭದಲ್ಲಿ 'ಜಂಗಮ ಪ್ರಾಣಿಯಾದ ಬಸವಣ್ಣನ ಪ್ರಾಣವು ಜಂಗಮಶ್ರೇಷ್ಠನೊಬ್ಬನ ಪ್ರಾಣ ಹೋದರೂ ಇನ್ನೂ ಇರುವುದು ಆಶ್ಚರ್ಯಕರ, ಅಂಥ ಸ್ಥಳಕ್ಕೆ ನಾನು ಬರಲಾರೆನು' ಎಂದು ಕರೆತರಲು ಹೋದ ಪಡಿಹಾರಿ ಉತ್ತಯ್ಯನಿಗೆ ಮಾಚಿದೇವರು ಹೇಳಿದಾಗ, ಇದನ್ನು ತಿಳಿದ ಬಸವೇಶ್ವರರು "ತನ್ನನ್ನು ಎಚ್ಚರಿಸಿದ ಮಡಿವಾಳ ತಂದೆ ಎನ್ನ ಸ್ವಾಮಿ ಸಂಗಯ್ಯ ಬದುಕಿದ ನೊರೆದೊರೆದು ಮನಚಿತ್ತದ ಮಲಿನಮಂ ಕಳೆದು ಭಾಷೆಯನೊದಪಿಸಿದನೆನಗೆ"[5] ಎಂದು ಹೇಳುತ್ತಾ ಪ್ರಾಣವನ್ನು ತ್ಯಜಿಸುತ್ತಾರೆ. ಪಡಿಹಾರಿ ಉತ್ತಣ್ಣನು ಮತ್ತೆ ಮಾಚಯ್ಯನವರಿಗೆ ಬಸವಣ್ಣನವರ ಪ್ರಾಣ ಪಕ್ಷಿ ಹಾರಿಹೋದ ವಿಷಯ ತಿಳಿಸಿದನು. ಇಡೀ ಕಲ್ಯಾಣದಲ್ಲಿ ಕೋಲಾಹಲವಾದ ಸಂದರ್ಭದಲ್ಲಿ ಮಾಚಯ್ಯನವರು ಪರಮಾತ್ಮನನ್ನು ಉದ್ದೇಶಿಸಿ "ಪರಶಿವನೇ ಭಕ್ತಿತತ್ಪರರೂ, ಜಂಗಮ ಪ್ರಾಣಿಗಳೂ ಆದ ಇವರಿಬ್ಬರನ್ನು ನೀನು ಅಕಾಲದಲ್ಲಿ ನಿನ್ನಲ್ಲಿಗೆ ಬರಮಾಡಿಕೊಳ್ಳಬೇಕೆ? ಈ ಕೇತಯ್ಯನ ಪ್ರಾಣವನ್ನು ಜಾಗ್ರತೆಯಾಗಿ ಹಿಂದಿರುಗಿಸು; ಅದರೊಡನೆ ಬಸವೇಶ್ವರನ ಪ್ರಾಣವೂ ಬರುವುದು" ಎಂದು ಭಕ್ತಿಯ ಉದ್ರೇಕದಿಂದ

"ಬಸವ ಕೇತಯ್ಯಗಳಿಬ್ಬರಂ ಕಳುಹದಿರೆಯುಸಮಾಕ್ಷನೆಮ್ಮ ಭಕ್ತರಿಗೆ ಹೊರಗು"[6] ಎಂದೂ ವೀರಗಂಟೆಯನ್ನು ಬಾರಿಸುತ್ತಾ ನುಡಿಯಲು ವಿಷಧರನು ಅವರಿಬ್ಬರಿಗೂ ಪ್ರಾಣವನ್ನು ಕೊಟ್ಟನು. ಈ ಪ್ರಸಂಗವನ್ನು ಸ್ವತಃ ಬಸವಣ್ಣನವರೇ ತಮ್ಮ ವಚನದಲ್ಲಿ ಉಲ್ಲೇಖಿಸಿ,

"ಎನ್ನ ವಚನ ರಚನೆಯ ಮೆಚ್ಚಿ
ಅಡಿಗಡಿಗೆ ಎನ್ನ ಮನದ ಮೈಲಿಗೆಯ ತೊಳೆದು
ಹೋದ ಪ್ರಾಣವ ಮರಳಿ ತಂದು ರಕ್ಷಿಸಿದ
ಕೂಡಲಸಂಗಮದೇವಯ್ಯ ಮಡಿವಾಳಯ್ಯಗಳ
ಕರುಣದಿಂದ ಮರುಳಶಂಕರದೇವ
ನಿಲುವ ಕಂಡು ಬದುಕಿದೆನು ಕಾಣಾ ಕಿನ್ನರಿಬ್ರಹ್ಮಯ್ಯ" [7]

ಎಂದು ಹಾಡಿ ಹೊಗಳುತ್ತಾರೆ. ನನ್ನ ವಚನಗಳ ರಚನೆಯನ್ನು ಮೆಚ್ಚಿ ಹೆಜ್ಜೆ ಹೆಜ್ಜೆಗೂ ನನ್ನ ಮಡಿಮಾಡಿದ ಮಡಿವಾಳ ಮಾಚಿ ತಂದೆಯಿಂದ ನಾನು ಮರಳಿ ಬದುಕಿದೆನು. ಮಾಚಿ ತಂದೆಯ ಕೃಪೆಯಿಂದ ಆತನ ಮಡಿಯನ್ನು ಹೊದ್ದು, ಆತ ನನ್ನನ್ನು ನಿರ್ಮಲನನ್ನಾಗಿ ಮಾಡಿ ಬದುಕಿಸಿದನೆಂದು ಕೊಂಡಾಡುತ್ತಾರೆ.

**ಚೆನ್ನಬಸವಣ್ಣ :–**

ಮಡಿವಾಳ ಮಾಚಿದೇವರನ್ನು ಕುರಿತು ಮಹಾಜ್ಞಾನಿ ಚೆನ್ನ ಬಸವಣ್ಣನವರೂ ತಮ್ಮ ಹಲವು ವಚನಗಳಲ್ಲಿ ಪ್ರಶಂಸಿಸುವುದನ್ನು ಕಾಣಬಹುದು. ಮಡಿವಾಳ ಮಾಚಿ ತಂದೆಯ ಬೆನ್ನಿಂದ ಭಕ್ತಿ ಭಂಡಾರಿ ಬಸವಣ್ಣನ ಜನನವಾಯಿತು. ಮಡಿವಾಳ ಮಾಚಿ ತಂದೆಯ ಉದರದಿಂದ ಚಿನ್ಮಯ ರೂಪಿ ಸಮ್ಯ ಜ್ಞಾನಿಯಾದ ಚೆನ್ನ ಬಸವಣ್ಣನ ಹುಟ್ಟು, ಮಾಚಯ್ಯನವರ ಬ್ರಹ್ಮ ರಂಧ್ರದಲ್ಲಿ ಅನುಭಾವಿಯಾದ ಅಲ್ಲಮಪ್ರಭು ಜನಿಸಿದರು. ಭಕ್ತಿ, ಜ್ಞಾನಾನುಭವಿಯಾಗಿದ್ದ ಮಡಿವಾಳಯ್ಯನು ಸಂಗನ ಸ್ವರೂಪನಾಗಿದ್ದನು, ಸಂಗನ ಬಸವಣ್ಣನಿಗೆ ಸಾಹಿತ್ಯವಾಗಿದ್ದನು. ಆಚಾರ ಸ್ವರೂಪವಾದ ಮಾಚಯ್ಯನವರು ಬಸವಣ್ಣ – ಚೆನ್ನ ಬಸವಣ್ಣ – ಅಲ್ಲಮ ಪ್ರಭುಗಳಿಗೆ ಆಧಾರವಾಗಿದ್ದನು. ಆ ಕೂಡಲಸಂಗನಂತೆ ಆರಾಧ್ಯನಾಗಿದ್ದನು. ಎಂದು ಚೆನ್ನಬಸವಣ್ಣನವರು ಮಾಚಿ ತಂದೆಯ ಮಹತ್ವ ಮನದಟ್ಟಾಗುವಂತೆ ವರ್ಣಿಸುತ್ತಾರೆ.

"ಬೆನ್ನಿನಲ್ಲಿ ಬಸವಣ್ಣನ ತೆಗೆದ, ಹೊಟ್ಟೆಯಲ್ಲಿ ತನ್ನ ತೆಗೆದ;
ಬ್ರಹ್ಮರಂಧ್ರದಲ್ಲಿ ಅಲ್ಲಯ್ಯನ ತೆಗೆದ
ಸಂಗನೋ ಮಡಿವಾಳನೋ, ಮಡಿವಾಳನೋ ಸಂಗನೋ
ಎಂದು ನುಡಿಯಲಮ್ಮೆನು
ಇದು ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ
ಮಡಿವಾಳ ಸಾಹಿತ್ಯ ನಮ್ಮ ಬಸವಣ್ಣಂಗೆ" [8]

ಅಲ್ಲದೇ, ಕಲ್ಯಾಣದ ಶಿವಶರಣರಲ್ಲಿ ಮಡಿವಾಳ ಮಾಚಿ ತಂದೆಗೆ ಹಿರಿಯ ಸ್ಥಾನ ಮೀಸಲಾಗಿತ್ತು. ಬಸವಣ್ಣನವರ ಸಮಸ್ಥಾನ ಸಂಪ್ರಾಪ್ತವಾಗಿತ್ತು. ಬಸವಣ್ಣ ಬಲಗೈಯಾದರೆ, ಮಡಿವಾಳ ಮಾಚಿತಂದೆಯವರು ಎಡಗೈಯಾಗಿದ್ದರು. ಇವರಿಬ್ಬರೂ ಅನುಭಾವಿ ಅಲ್ಲಮಪ್ರಭು ದೇವರಿಗೆ ಎರಡು ತೋಳುಗಳಂತಿದ್ದರೆಂದು ಸ್ವತಃ ಚೆನ್ನಬಸವಣ್ಣನವರೇ ವಚನದಲ್ಲಿ ಹೇಳಿದ್ದಾರೆ. ಮಾಚಿತಂದೆಯ ಗೌರವ, ಸ್ಥಾನ – ಮಾನಗಳ ವರ್ಣನೆಗೆ ಮತ್ತೊಂದು ಗರಿಯನ್ನಿಡುತ್ತಾರೆ. ಮಡಿವಾಳ ಮಾಚಿತಂದೆಯ ಮಹಿಮೆಯನ್ನು ನಿಜದ ನಿಲುವಿನಲ್ಲಿ ಮನವರಿಕೆ ಮಾಡಿಕೊಂಡವರು ಸಮ್ಯಗ್ ಜ್ಞಾನಿ ಚೆನ್ನಬಸವಣ್ಣನವರು ಪ್ರಭುದೇವರು ಬಸವಣ್ಣನವರನ್ನು ಪರಿಪೂರ್ಣವಾಗಿ ತಿಳಿದು ಕೊಂಡಂತೆ ಎಲ್ಲರನ್ನೂ ಎಲ್ಲವನ್ನು ಮಡಿ ಮಾಡಿ ಬಂದ ಮಾಚಯ್ಯನವರನ್ನೂ ಚೆನ್ನಾಗಿ ಬಲ್ಲವರು. "ಬಹಿರಂಗದಲ್ಲಿ ಮಡಿವಾಳಯ್ಯನ ಒಳಗೊಂಡು, ಅಂತರಂಗದಲ್ಲಿ ಪ್ರಭುದೇವರನ್ನು ಒಳಗೊಂಡು" ಎಂದು ಸ್ತುತಿಸುತ್ತಾರಲ್ಲದೆ ಬಸವಣ್ಣ – ಮಾಚಯ್ಯನವರನ್ನು ಸಮಪ್ರಮಾಣದ ಸ್ಥಾನ – ಮಾನಗಳಲ್ಲಿಟ್ಟು ಗೌರವಿಸುತ್ತಾರೆ.

"ಅನಾನಹುತದಲ್ಲಿ ಶಿವ ತನ್ನ ಲೀಲಾವಿನೋದದಿಂದ
ಶರಣರು ಸಹಿತಮೂರ್ತಿಯಾದನು
ಹೊರಗೆ ಆಕಾರವ ಧರಿಸಿ, ಒಳಗೆ ನಿರವಯಕ್ಕೆ
ಆರೋಗಣೆಯ ಮಾಡಿಸಲು, ಕೂಡಲ ಚೆನ್ನಸಂಗಮದೇವಾ,
ಪ್ರಭುದೇವರ ಅಪರಿಮಿತಾರೋಗಣೆಗೆ
ಬಸವಣ್ಣ– ಮಡಿವಾಳನೆಂಬ ಎರಡು ತೋಳ
ಧರಿಸಿದನು; ಅದನೇನೆಂದು ಪಮಿಸುವೆನಯ್ಯಾ" [9]

ಮುಂದುವರೆದು ಚೆನ್ನಬಸವಣ್ಣನವರು ಲಿಂಗ – ಜಂಗಮ ಸ್ವರೂಪಿಗಳೆಂದು ಮಡಿವಾಳ ಮಾಚಯ್ಯನನ್ನು ಮತ್ತು ಬಸವಣ್ಣನನ್ನು ಕೊಂಡಾಡುತ್ತಾರೆ "ಲಿಂಗ ಸಾಹಿತ್ಯ ಮಡಿವಾಳ, ಜಂಗಮಸಾಹಿತ್ಯ ಬಸವಣ್ಣ, ಇವರಿಬ್ಬರ ಪ್ರಸಾದ ಸಾಹಿತ್ಯ ನಾನೇ ಕೂಡಲ ಚನ್ನಸಂಗಯ್ಯ" [10] ಎಂದೂ ಮಡಿವಾಳಯ್ಯನ ನಿಲುವನ್ನು ನಾನು ಹೇಗೆ ತಿಳಿಯಲು ಸಾಧ್ಯ ನಾನೊಂದೂ ಮಾಡುವುದಕ್ಕೆ ತಿಳಿಯುತ್ತಿಲ್ಲ, ನಾನೊಂದೂ ಹೇಳುವುದಿಕ್ಕೆ ತಿಳಿಯದಾಗಿದ್ದೇನೆ. ಮಾಚಯ್ಯನ ಘನಮಹಿಮೆಯನ್ನು ಹೇಗೆ ಅರ್ಥೈಸಲಿ? ಎನ್ನುತ್ತಾರೆ ಚೆನ್ನಬವಸಣ್ಣ.

**ಅಕ್ಕಮಹಾದೇವಿ :–**

ವೈರಾಗ್ಯನಿಧಿಯಾದ ಅಕ್ಕಮಹಾದೇವಿಯು ಕೂಡ ಮಡಿವಾಳ ಮಾಚಯ್ಯನವರನ್ನು ವಿಶೇಷವಾದ ಪ್ರೀತಿಯಿಂದ ಗೌರವಭಾವನೆಗಳಿಂದ 'ಮಾಚಿತಂದೆ' ಎಂದೇ ಸಂಬೋಧಿಸುತ್ತಾಳೆ. "ಮಡಿವಾಳಯ್ಯನವರ ಪ್ರಸಾದವನ್ನು ಕೊಂಡು ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ, ಸಿದ್ಧರಾಮಯ್ಯನ ಪ್ರಸಾದವ ಕೊಂಡು ಎನ್ನ ಕರಣಂಗಳು ಶುದ್ಧವಾಯಿತ್ತಯ್ಯಾ, ಬಸವಣ್ಣನ ಪ್ರಸಾದ ಕೊಂಡು ಭಕ್ತಿಸಂಪನನಾದೆನ್ಯಯಾ, ಚೆನ್ನಬಸವಣ್ಣನ

ಪ್ರಸಾದವಕೊಂಡು ಜ್ಞಾನ ಸಂಪನ್ನನಾದೆನಯ್ಯಾ, ಪ್ರಭುದೇವರ ಪ್ರಸಾದವ ಕೊಂಡು ಚೆನ್ನಮಲ್ಲಿಕಾರ್ಜುನಯ್ಯನ ಕೂಡಿ ಸುಖಿಯಾದೆನು"[11] ಎಂದು ಮಹಾದೇವಿಯಕ್ಕ ಸ್ತುತಿಸುತ್ತಾಳೆ. 'ಮಡಿವಾಳಯ್ಯನ ಮನೆಯ ಮಗಳಾದ ಕಾರಣ ನಿರ್ಮಲ ಪ್ರಸಾದವ ನಿಕ್ಷೇಪಿಸಿಕೊಟ್ಟನೆಂದು' ವಿವರಿಸುತ್ತಾಳೆ. ಪ್ರತಿಯೊಬ್ಬ ವಚನಕಾರ, ಶಿವಶರಣರಿಂದ ಒಂದೊಂದು ಗುಣಗಳು ಎನ್ನಲ್ಲಿ ಕೂಡಿಕೊಂಡು ಕರುಣಪ್ರಸಾದದಿಂದ ಪರಿಪೂರ್ಣಗಳಾದೆನೆಂದು ಅಕ್ಕ ಮಹಾದೇವಿ ಎಲ್ಲ ಶರಣರ ವಿಶೇಷ ಗುಣಗಳನ್ನು ತನ್ನ ವಚನದಲ್ಲಿ ಉಲ್ಲೇಖಿಸುತ್ತಾಳೆ.

"ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ
ಮಡಿವಾಳಯ್ಯನ ನಿಷ್ಠೆ – ಪ್ರಭುದೇವರ ಜಂಗಮ ಸ್ಥಲ
ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ
ಸಿದ್ಧರಾಮಯ್ಯನ ಸಮಾಧಿಸ್ಥಲ
ಇಂತಿವರ ಕರುಣ ಪ್ರಸಾದ ಎನಗಾಯಿತ್ತು
ಚೆನ್ನಮಲ್ಲಿಕಾರ್ಜುನಯ್ಯಾ" [12]

ಎಂದು ಹೇಳಿ 'ಕಾಯಕ ನಿಷ್ಠೆ'ಗೆ ಪ್ರತೀಕವಾಗಿರುವಂತಹ ಮಾಚಿತಂದೆಯನ್ನು ಕೊಂಡಾಡುವ ಬಗೆ, ಮಾಚಿ ತಂದೆಗಳ ನಿರ್ಮಲ ಪ್ರಸಾದದಿಂದ ಚೆನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದೆಳೆಂದು, 'ಬಸವಣ್ಣನೇ ಗುರು, ಪ್ರಭುದೇವರೆ ಲಿಂಗ, ಸಿದ್ಧರಾಮಯ್ಯನೇ ಜಂಗಮ, ಮಡಿವಾಳಯ್ಯನೇ ಹೆತ್ತ ತಂದೆ, ಚೆನ್ನ ಬಸವಣ್ಣನೆನ್ನ ಪರಮಾರಾಧ್ಯರು ಇನ್ನೂ ಸುಖಿಯಾದೆನು ಕಾಣಾ ಮಲ್ಲಿಕಾರ್ಜುನಯ್ಯಾ" ಎನ್ನುತ್ತಾ 'ತಂದೆ'ಯ ಪೂಜ್ಯಸ್ಥಾನವನ್ನು ಮಾಚಯ್ಯನವರಿಗೆ ನೀಡಿದ್ದಾಳೆ.

ಶರಣ ಮರುಳ ಶಂಕರದೇವನು ತನ್ನ ವಚನಭಾಗದಲ್ಲಿ "ಮಡಿವಾಳ ಮಾಚಿ ತಂದೆಯಿಂದ ನಿರ್ಮಲ" ಪ್ರಸಾದವ ಕೊಂಡು ಚೆನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದ ಅಕ್ಕ ಮಹಾದೇವಿಯಂತೆ ಎನ್ನ ಜೀವಾತ್ಮ ಚೇತನವಯ್ಯಾ ಮಡಿವಾಳ ಮಾಚಿತಂದೆ" [13] ಎನ್ನುತ್ತಾನೆ. ಇವರಂತೆಯೇ ಆದಯ್ಯ, ಸಿದ್ಧರಾಮ, ಆಯ್ದಕ್ಕಿ ಮಾರಯ್ಯ, ನುಲಿಯ ಚಂದಯ್ಯ, ಡೆಕ್ಕೆಯ ಬೊಮ್ಮಣ್ಣ ಮುಂತಾದ ಶರಣ ಪರಂಪರೆಯ ಶರಣರು ತಮ್ಮೊಡನೆ ಅನುಭವ ಮಂಟಪದಲ್ಲಿದ್ದು, ವಿಚಾರಮಂಥನದಲ್ಲಿ ತೊಡಗಿಸಿಕೊಂಡು, ಕಾಯಕ ನಿಷ್ಠೆಯನ್ನು ಎತ್ತಿ ತೋರುತ್ತಾ, ಸಮಕಾಲೀನ ಶರಣರೊಂದಿಗೆ ಹೊಂದಿದ್ದ ಒಡನಾಟವನ್ನು, ಹತ್ತಿರದಿಂದ ತಾವು ಕಂಡ ಕಲಿದೇವರ ಶರಣ ಮಡಿವಾಳ ಮಾಚಯ್ಯನವರನ್ನು ಚಿತ್ರಿಸಿರುವುದು ಔಚಿತ್ಯಪೂರ್ಣವಾಗಿದೆ. ಶರಣರ ಜೀವನಕ್ಕೊಂದು ನವ ಚೈತನ್ಯವನ್ನು ತಂದು ಕೊಟ್ಟು, ಆಧ್ಯಾತ್ಮದ ತುತ್ತ ತುದಿಯನ್ನೇರಿದ ಮಾಚಯ್ಯನವರನ್ನು ಕುರಿತು "ಮಡಿವಾಳ ತಂದೆಯ ನಿಲುವು ನಿಡಿದಾದುದು, ನಿಜ್ಜೆರೆಗಾದುದು ನಿಜವೆರಸಿ ನಿರ್ಮಲವಾದುದು"[14] ಎಂದು ಡಾ. ಜ. ಚ. ನಿಯವರು ಮುಕ್ತಕಂಠದಿದ ಹೊಗಳಿರುವುದು ಸಮಂಜಸವೆನಿಸುತ್ತದೆ.

**ಅಧ್ಯಾಯ – 5 ರ ಅಡಿಟಿಪ್ಪಣಿಗಳು :–**

1. ಡಾ. ಬಿ. ವ್ಹಿ. ಮಲ್ಲಾಪುರ. ಅಲ್ಲಮಪ್ರಭುದೇವರ ವಚನ ಸಂಪುಟ 2. ಪುಟ 247
2. ಡಾ. ಎಂ. ಎಂ. ಕಲಬುರ್ಗಿ. ಬಸವಣ್ಣನವರ ವಚನ ಸಂಪುಟ 1. ಪುಟ 362
3. ಅದೇ., ಪುಟ 321
4. ಅದೇ., ಪುಟ 295
5. ಕೆ. ಜಿ. ಶಿವಲಿಂಗಯ್ಯ, ಬಸವೇಶ್ವರರ ಸಮಕಾಲೀನರು, ಪುಟ 471
6. ಅದೇ., ಪುಟ 472
7. ಕೆ. ಅಶೋಕ ದೊಮ್ಮಲೂರು, ಮಡಿವಾಳ ಮಾಚಿದೇವ, ಪುಟ 84
8. ಜ. ಚ. ನಿ., ರಜಕರತ್ನ ಮಾಚಿತಂದೆ, ಪುಟ 9
9. ಅದೇ., ಪುಟ 3
10. ಡಾ. ಬಿ. ವ್ಹಿ. ಮಲ್ಲಾಪುರ, ಚನ್ನಬಸವಣ್ಣನವರ ವಚನ ಸಂಪುಟ 3, ಪುಟ 29
11. ಡಾ. ವೀರಣ್ಣ ರಾಜೂರ, ಶಿವಶರಣೆಯರ ವಚನಸಂಪುಟ – 5 – ಪುಟ 83
12. ಅದೇ., ಪುಟ 75
13. ಜಿ. ವಿ. ಶಾಸ್ತ್ರಿ, ಮಡಿವಾಳ ಮಾಚಯ್ಯ, ಪುಟ 28
14. ಜ. ಚ. ನಿ., ರಜಕರತ್ನ ಮಾಚಿತಂದೆ, ಪುಟ 56

# ಅಧ್ಯಾಯ – 6

# ಸಮಾರೋಪ

ಮಡಿವಾಳ ಮಾಚಿದೇವರ ವಚನಗಳು 12ನೇ ಶತಮಾನದಲ್ಲಿ ರೂಪುಗೊಂಡ ಸಾಹಿತ್ಯದ ಪ್ರಕಾರ ಮಾತ್ರವಲ್ಲದೇ 'ವಚನಸಂಸ್ಕೃತಿ'ಯ ಭಾಗವಾಗಿ ಗೋಚರಿಸುತ್ತವೆ. ಮಾಚಿದೇವರ ವಚನಗಳನ್ನೆಲ್ಲಾ ತಲಸ್ಪರ್ಶಿಯಾಗಿ ಅಭ್ಯಸಿಸಿದಾಗ, ಮಾಚಿದೇವರು 'ಕಾಯಕ ನಿಷ್ಠ'ನಲ್ಲದೆ ಅದರಲ್ಲಿ ಪರಿಣಿತಿಯನ್ನು ಪಡೆದವರಾಗಿದ್ದರು. ಕೇವಲ ಉಟ್ಟು ಬಿಟ್ಟ ಬಟ್ಟೆಗಳನ್ನು ತೊಳೆಯಲು ಬಂದವರಲ್ಲದೆ, ತೊಟ್ಟು ಬಂದ ದೇಹ, ಮನದ, ಇಂದ್ರಿಯಗಳನ್ನು ತೊಳೆಯುವ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಉಟ್ಟ ಬಟ್ಟೆಯನ್ನು ತೊಳೆಯುವ ಕಾಯಕವನ್ನು ಯಾರಾದರೂ ಮಾಡಬಹುದು ಆದರೆ ಅಂತರಂಗವನ್ನು ಶುದ್ಧಿಗೊಳಿಸುವ ಕಾಯಕ ಕೈಗೊಳ್ಳುವವರು ವಿರಳ. ತಾನು ತೊಟ್ಟು ಬಂದ ಬಯಲು ಬಟ್ಟೆಯನ್ನು ವೀರಭದ್ರನ ಕಾಲದಿಂದಲೂ ಬಿಳಿದಾಗಿಸುವವನು. ಸಮಾಜದಲ್ಲಿನ ಅನಾಚಾರ, ಸುಳ್ಳು, ಮೋಸ, ವಂಚನೆ, ದುರಾಚಾರ ಮುಂತಾದವುಗಳನ್ನು ಕಂಡಾಗ ಕಿಂಚಿತ್ತೂ ಸಹಿಸದೆ ಪ್ರತಿಭಟಿಸುವ ವ್ಯಕ್ತಿತ್ವದ ಗಣಾಚಾರಿಯಾಗಿದ್ದವರು ಮಡಿವಾಳ ಮಾಚಿದೇವರು ದುರಾಚಾರ ದುರ್ಗಣಗಳ ಆಟ ಈತನ ಮುಂದೆ ನಡೆಯದು ಸಮಾಜದಲ್ಲಿರುವ ಅನಿಷ್ಟಗಳ ಪ್ರತಿಭಟನೆಯೇ ಗಣಾಚಾರವಾಗಿದೆ. ಗಾಂಧೀಜಿಯವರ ಮಾತಿನಂತೆ ಹೇಳುವುದಾದರೆ 'ಅನ್ಯಾಯ ಅನಾಚಾರಗಳ ದುರಾಚಾರಗಳ ವಿರುದ್ಧ ಹೋರಾಡುವ ಅಹಿಂಸಾತ್ಮಕ ಪ್ರತಿಭಟನೆ' ಇತರರಲ್ಲಿರುವ ದುರಾಚಾರ, ದುರ್ಗುಣಗಳ ಖಂಡಿಸಿ ರಾಗ ದ್ವೇಷಗಳೊಡನೆ ಹೋರಾಡಿ ಜಯಿಸಿ, ಬೋಧನಾತ್ಮಕ ನಿಲುವಿನ ಮುಖೇನ ಸಮಾಜದ ಸ್ವಾಸ್ಥ್ಯಕ್ಕೆ ಶ್ರಮಿಸಿದವರು.

ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಚನ್ನಬಸವಣ್ಣ, ಮಾಚಿದೇವ, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಮುಂತಾದ ಏಳ್ನೂರ ಎಪ್ಪತ್ತು ಶಿವಶರಣರು ಜಾತಿವಾದಿಗಳ ಎದುರಿಗೆ ಪರಂಪರೆಯ ಸಾಂಸ್ಕೃತಿಕ ಪಥ್ಯವನ್ನು ವಚನಗಳ ಮುಖೇನ ತೆರೆದಿಡುತ್ತಾರೆ. ಮಡಿವಾಳ ಮಾಚಯ್ಯನವರ ವಚನಗಳು ಸಮಾಜ ಮುಖಿಯಾಗಿ ಕಂಡು ಬಂದು ವಚನ ಸಾಹಿತ್ಯದ ಪರಿಕಲ್ಪನೆಗಳನ್ನು ಪರಿಚಯಿಸುವುದಷ್ಟೇ ಅಲ್ಲದೇ ಚಿಂತನೆಗೆ ಹಚ್ಚುವಂತೆ ಮಾಡುತ್ತವೆ. ತಮಗಾಗಿ ಏನನ್ನೂ ಬಯಸದೇ ಕಹಿನುಂಗಿ ಸಿಹಿ ಹಂಚಿದವರು ಮಾಚಿದೇವ ಮತ್ತು ಮುಂತಾದ ಶಿವಶರಣರು. ಶರಣರ ತಾರಾಗಣದಲ್ಲಿ ಧ್ರುವ ನಕ್ಷತ್ರದಂತೆ ಮಾಚಿದೇವರ ವಚನಗಳು ಕಂಗೊಳಿಸುತ್ತವೆ. ಶರಣರ ನುಡಿಗಳು ಕೇವಲ ನುಡಿಗಳಲ್ಲ, ಅವರ ಅನುಭವದ ಆಳದಿಂದ ಬಂದ ಜ್ಯೋತಿಗಳಾಗಿವೆ. ಇಂತಹ ವಚನ ಜ್ಯೋತಿಗಳು ಸಮಾಜದ ಕಗ್ಗತ್ತಲನ್ನು ದೂರಸರಿಸುವುದರಲ್ಲಿ ಯಶಸ್ವಿಯಾಗುತ್ತವೆ. ಪ್ರಸ್ತುತ ಸಮಾಜದಲ್ಲಿನ ಜಾತೀಯತೆ, ದುರಾಚಾರ, ಅನಾಚಾರ, ಅನ್ಯಾಯ, ಸ್ವಹಿತ

ಚಿಂತನೆ, ಸ್ವಧರ್ಮ ಪ್ರತಿಪಾದನೆ, ಅಮಾನುಷ ಚಿಂತನೆ, ಸ್ವಾರ್ಥಲೋಲುಪತೆ, ದ್ವೇಷ, ಅಸೂಯೆ, ಈರ್ಷೆ ಮುಂತಾದ ಕೆಟ್ಟ ಗುಣಗಳಿಗೆಲ್ಲ ಮಡಿವಾಳ ಮಾಚಿದೇವರ ಮತ್ತು ಬಸವಾದಿ ಶಿವಶರಣರ ವಚನಗಳು ದಿವ್ಯ ಔಷಧಿಯಂತೆ ಕಂಡುಬರುತ್ತವೆ. ಮಾನವ ಧರ್ಮದ ಉಳಿವು, ಸಂಸ್ಕೃತಿಯ ರಕ್ಷಣೆ, ಮತೀಯ ಖಂಡನೆ, ಜಾತ್ಯತೀತ ನಿಲುವಿನ ಪ್ರತಿಪಾದನೆ, ಸಮಾನತೆಯ ತತ್ವದ ಪ್ರತಿಷ್ಠಾಪನೆ. ವೈಚಾರಿಕ ನಿಲುವುಗಳು ಶರಣರಿಗೆ ಬಹಳ ಮುಖ್ಯವಾದವುಗಳಾಗಿತ್ತೆಂಬುದನ್ನು ಮಾಚಿದೇವರ ವಚನಗಳ ಅಧ್ಯಯನದಿಂದ ವೇದ್ಯವಾಗುತ್ತದೆ. ಕೇವಲ ಶರಣರ ಬಟ್ಟೆಗಳನ್ನಷ್ಟೇ ಮಡಿಮಾಡದೆ, ಜನರ ಮನದ ಮೈಲಿಗೆಯನ್ನು ಕಳೆಯುವ ಮಡಿವಾಳ ಮಾಚಿದೇವರ ವಚನ 'ಸಾಬೂನು ಸಾಮಾನ್ಯದ್ದಲ್ಲ' ಅದು ಮುಟ್ಟಿದ್ದು ಮಡಿಯಾಗಲೇ ಬೇಕು. ಸಮಾಜದ ಬದುಕಿನಲ್ಲಿ ಮಡಿವಾಳ ಮಾಚಿದೇವರಂತಹ ದಿಟ್ಟ ನಿಲುವಿನ ಸುಧಾರಕರು. ವೀರಶರಣರು ಬೇಕಾಗಿದ್ದಾರೆಂದನಿಸುತ್ತದೆ. 'ಅಗಸಮುನಿವುದು ಮಲಿನಕ್ಕೆ ವಸ್ತ್ರಕ್ಕಲ್ಲ. ಶರಣ ಮುನಿವುದು ಅವಗುಣಕ್ಕೆ ಶಿವಭಕ್ತನಿಗಲ್ಲ' ಎನ್ನುವ ಮಾಚಿದೇವರ ಮಾತು ಕಾಯಕದ ಮಹತ್ವವನ್ನು ಮತ್ತು ನಿಜಸ್ವರೂಪವನ್ನು ವ್ಯಕ್ತಪಡಿಸುತ್ತದೆ. ಔದ್ಯೋಗಿಕ ಸಮಾನತೆಯ ತತ್ವವನ್ನೂ ಪ್ರತಿಪಾದಿಸುವ ಮಾಚಿದೇವರಿಗೆ ಬಸವಣ್ಣನವರನ್ನು ಕಂಡರೆ ಅತೀವ ಪ್ರೀತಿ ಮತ್ತು ಭಕ್ತಿ ಎನ್ನುವ ವಿಚಾರಗಳು ಮಾಚಿದೇವರ ವಚನಾಭ್ಯಾಸದಿಂದ ವ್ಯಕ್ತವಾಗುತ್ತದೆ. ಸುಮಾರು ತೊಂಭತ್ತೆಂಟಕ್ಕೂ ಹೆಚ್ಚು ವಚನಭಾಗದಲ್ಲಿ ಭಕ್ತಿಭಂಡಾರಿ ಬಸವಣ್ಣನವರನ್ನು ವರ್ಣಿಸುವ, ವಿವರಿಸುವ, ವಿಶ್ಲೇಷಿಸುವ, ಹಾಡಿ ಹೊಗಳುವ, ಪ್ರತಿಪಾದಿಸುವ, ತಿಳಿ ಹೇಳುವ ವಿಚಾರಗಳನ್ನು ಗಮನಿಸಿದಾಗ 'ಬಸವಣ್ಣ – ಮಾಚಿದೇವರು' ಎರಡು ದೇಹ ಒಂದೇ ಆತ್ಮವಿದ್ದಂತಿದ್ದರೆನ್ನಲಡ್ಡಿಯಿಲ್ಲ. ನೀಲಮ್ಮ ಬಸವಣ್ಣನವರ ವಿಚಾರ ಪತ್ನಿಯಾದರೆ ಮಾಚಿದೇವರು ವೈಚಾರಿಕ ಸಖನಾಗಿದ್ದವರು. ಬುದ್ಧನಿಗೆ ಆನಂದ, ಉಪಾಲಿಯರಿದ್ದಂತೆ, ಯೇಸುವಿಗೆ ಮ್ಯಾಥ್ಯೂಮಾರ್ಲ್ಸ್‌ಲ್ಯೂಕ್, ಜಾನ್ ಆದಿಗಳಿದ್ದಂತೆ, ಗಾಂಧೀಜಿಗೆ ಮಹಾದೇವ ದೇಸಾಯಿ, ಪ್ಯಾರೇಲಾಲ್‌ಗಳಿದ್ದಂತೆ ಬಸವಣ್ಣನವರಿಗೆ ಮಾಚಯ್ಯ, ಚೆನ್ನಬಸವಣ್ಣ ಅಪ್ಪಣ್ಣಗಳಿದ್ದರು" ಎನ್ನುವ ಜಂಬಣ್ಣ ಅಮರಚಿಂತವರವರ ಮಾತನ್ನು ಒಪ್ಪತಕ್ಕದ್ದಾಗಿದೆ ಮಾಚಿದೇವರ ವಚನ ಸಾಹಿತ್ಯವು ದಟ್ಟವಾದ ಲೋಕಾನುಭವದಿಂದ, ಗಂಭೀರ ಚಿಂತನೆಗಚ್ಚುತ್ತವೆ. "ವ್ಯಕ್ತಿಗೌರವ"ವೇ ಮರೆಯಾಗುತ್ತಿರುವ ಪ್ರಸ್ತುತ ದಿನಮಾನಗಳಲ್ಲಿ ಮಾಚಿದೇವರ ವಚನಗಳ ಅಧ್ಯಯನ ಮತ್ತು ಶೋಧನದಿಂದ ಜನ ಸಮುದಾಯವು ವ್ಯಕ್ತಿಗೌರವನ್ನು ಅಳವಡಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಪ್ರಕಟಪಡಿಸುತ್ತವೆ. ಶರಣರು ತತ್ವ ಸಿದ್ಧಾಂತದಲ್ಲಿ ಯಾವ ದರ್ಶನವನ್ನು ಕಂಡರೋ ಅದನ್ನು ನಿತ್ಯ ಜೀವನದಲ್ಲಿ ನಡೆದು ತೋರಿಸಿದವರು, ಸಂಸಾರಿಯಾಗಲಿ, ಸನ್ಯಾಸಿಯಾಗಿರಲಿ, ಜ್ಞಾನಿಯಾಗಿರಲಿ, ಭಕ್ತನಾಗಿರಲಿ, ಪುರುಷ – ಸ್ತ್ರೀಯಾರಾದರಾಗಿರಲಿ, ಎಲ್ಲ ಶರಣರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಲೇ ಆದರೂ ಅವುಗಳಿಗೆ ಅಂಟದೆ ಸರ್ವಾರ್ಪಣೆಯ ಭಾವನೆಯಿಂದ ಸಾಧನೆಯ ಮಾರ್ಗದಲ್ಲಿ ನಡೆದರೆನ್ನುವ ವಿಚಾರಗಳು ಮಾಚಿದೇವರ ವಚನಗಳ ಶೋಧದಿಂದ ತಿಳಿಯಲ್ಪಡುತ್ತವೆ. ಶ್ರಮಿಕ ವರ್ಗದ ಕರ್ತವ್ಯಪ್ರಜ್ಞೆಗೆ ಹೆಚ್ಚಿನ ಮನ್ನಣೆ ತಂದು ಕೊಡುವಲ್ಲಿ, ಮಾನವ ಕಲ್ಯಾಣದ ವಿಚಾರಗಳ ಪ್ರತಿಪಾದನೆಯಲ್ಲಿ ಮಾಚಿದೇವರ ವಚನಗಳು ಬೆಳಕು ಚೆಲ್ಲುವುದನ್ನು ತಿರುಗಿಸಬಹುದಾಗಿದೆ.

ಒಟ್ಟಿನಲ್ಲಿ ಮಡಿವಾಳ ಮಾಚಿದೇವರ ವಚನಗಳು ಅಧ್ಯಯನ, ಅಭ್ಯಾಸದಿಂದ 'ಮಾನವನಾಗಿ ಹುಟ್ಟಿದ ಪ್ರತಿಯೊಬ್ಬನೂ ತನ್ನ ಓರೆಕೋರೆಗಳನ್ನು ತಿದ್ದಿಕೊಂಡು, ನುಡಿ ನಡೆಗಳನ್ನು ಒಂದಾಗಿಸಿ ಬಾಳು ಬಂಗಾರವಾಗಿಸುತ್ತಾ, ತನ್ನ ಒಳಿತನ್ನು ಮಾಡುತ್ತ ಸಕಲರ ಲೇಸನ್ನು ಬಯಸುತ್ತ ಅಣುವಿನಿಂದ ಮಹತ್ತಿನೆಡೆಗೆ ಸಾಗುವ ಸಂದೇಶವನ್ನು ವ್ಯಕ್ತಪಡಿಸುತ್ತವೆ. ಮಾನವೀಯ ಮೌಲ್ಯಗಳನ್ನು ಸಾರ್ವತ್ರೀಕರಣ ಗೊಳಿಸುವಂತಹ ಕಾರ್ಯವಾಗಬೇಕಾಗಿರುವ ಜಾಗೃತಿಯನ್ನುಂಟುಮಾಡುತ್ತದೆ. ಕೇವಲ ಇಷ್ಟಕ್ಕೆ ಮಡಿವಾಳ ಮಾಚಿದೇವರ ವಚನಗಳು ಸೀಮಿತಗೊಳ್ಳದೆ, ಬಸವಣ್ಣ ಮತ್ತು ಮಾಚಿದೇವರ ವಚನಗಳ ತೌಲನಿಕ ಅಭ್ಯಾಸಕ್ಕೆ ದಾರಿಮಾಡಿಕೊಡುತ್ತವೆ. ಹಾಗೂ ಮುಂದಿನ ಸಂಶೋಧನೆಗೆ ಪೂರಕವಾಗುವಂತಹ ನಿಟ್ಟಿನಲ್ಲಿ ಮಾಚಿದೇವರ ವಚನಗಳ ಶೋಧಾಭ್ಯಾಸವು ಎಡೆಮಾಡಿಕೊಡುತ್ತದೆ.

# ಆಕರಗ್ರಂಥಗಳು

1. ಡಾ. ಎಲ್. ಬಸವರಾಜು – ಬಸವ ವಚನಾಮೃತ
ಬೆಂಗಳೂರು
1966

2. ಡಾ. ಎಲ್. ಬಸವರಾಜು – ಬಸವನವರ ವಚನಗಳು
ಸಪ್ನಬುಕ್ ಹೌಸ್
ಗಾಂಧೀನಗರ, ಬೆಂಗಳೂರು
2016

3. ಡಾ. ಎಂ. ಎಂ. ಕಲುಬುರ್ಗಿ – ಬಸವಣ್ಣನವರ ವಚನ ಸಂಪುಟ – 1
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

4. ಡಾ. ಬಿ. ವ್ಹಿ. ಮಲ್ಲಾಪುರ – ಅಲ್ಲಮ ಪ್ರಭುದೇವರ ವಚನ ಸಂಪುಟ – 2
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

5. ಡಾ. ಬಿ. ವ್ಹಿ. ಮಲ್ಲಾಪುರ – ಚೆನ್ನಬಸವಣ್ಣನವರ ವಚನ ಸಂಪುಟ – 3
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

6. ಡಾ. ಜಿ.ಆರ್. ಹಿರೇಮಠ – ಸಂಕೀರ್ಣ ವಚನ ಸಂಪುಟ – 3
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

7. ಡಾ. ಬಿ.ಆರ್. ಹಿರೇಮಠ – ಸಂಕೀರ್ಣ ವಚನ ಸಂಪುಟ – 4
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

8. ಡಾ. ವೀರಣ್ಣ ರಾಜೂರ – ಶಿವಶರಣೆಯರ ವಚನ ಸಂಪುಟ – 5
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು
1993

9. ಎಂ. ಆರ್. ಶ್ರೀನಿವಾಸಮೂರ್ತಿ – ವಚನ ಧರ್ಮಸಾರ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು
1977

10. ಡಾ. ಪಿ. ವಿ. ನಾರಾಯಣ – ವಚನ ಪರಿಸರ
ನೇತ್ರಾ ಮುದ್ರಾಣಲಯ
ಚಾಮರಾಜಪೇಟೆ
ಬೆಂಗಳೂರು
1993

11. ಶ್ರೀ ಜ. ಚ. ನಿ. – ರಜಕರತ್ನ ಮಾಚಿತಂದೆ
ಶ್ರೀಶೈಲ ಸಂಸ್ಥಾನ
ಗೂಳೂರು
1970

12. ಡಾ. ಬಿ.ಆರ್. ಗದ್ದಗಿಮಠ – ಕನ್ನಡ ಜಾನಪದಗೀತೆಗಳು
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
1969

13. ಜಿ. ವಿ. ಶಾಸ್ತ್ರಿ – ಮಡಿವಾಳಮಾಚಯ್ಯ
ಪಾರು ಪ್ರಕಾಶನ
ಸ್ಟೇಶನ್ ರಸ್ತೆ
ಗದಗ

14. ವರದಾ ಶ್ರೀನಿವಾಸ – ಮಡಿವಾಳಮಾಚಯ್ಯ
ಕನ್ನಡ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು
1994

15. ಪಾರ್ವತಿ. ಬ. ಚಿಕ್ಕಿ – ಶರಣ ಮಡಿವಾಳ ಮಾಚಿದೇವ
ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ
1991

16. ಕೆ. ಅಶೋಕ ದೊಮ್ಮಲೂರು – ಮಡಿವಾಳ ಮಾಚಿದೇವ
ಮಾಚಿ ಸಮಿತಿ
ದೊಮ್ಮಲೂರು, ಬೆಂಗಳೂರು
2013

17. ಆರ್. ರಾಚಪ್ಪ – ವಚನಾನುಭವ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು
1995

18. ಡಾ. ಎಸ್. ಶಿವರಾಜಪ್ಪ – ಮಡಿವಾಳ ಮಾಚಿದೇವ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು ಘಟಕ, ಮೈಸೂರು
1999

19. ಡಾ. ಪಿ. ವಿ. ನಾರಾಯಣ – ವಚನ ನಿರ್ವಚನ
ಪುಸ್ತಕಾಲಯ
ಮೈಸೂರು
1990

20. ಎಸ್. ಉಮಾದೇವಿ – ಅಂಬಿಗರ ಚೌಡಯ್ಯನ – ವಚನಗಳು
ವೈಭವಲಕ್ಷ್ಮಿ ಪ್ರಕಾಶನ
ಹುಬ್ಬಳ್ಳಿ
2005

21. ಡಾ. ಎಂ. ಎಂ. ಕಲಬುರ್ಗಿ – ಸಮಗ್ರ ವಚನ ಸಂಪುಟ 1
ಕನ್ನಡ ಪುಸ್ತಕಪ್ರಾಧಿಕಾರ
ಬೆಂಗಳೂರು
2001

22. ಡಾ. ಎಚ್. ಟಿ. ಪೋತೆ – ಶರಣ ಸಂಸ್ಕೃತಿ ಮತ್ತು...
ಸಪ್ನ ಬುಕ್ ಹೌಸ್
ಗಾಂಧೀನಗರ, ಬೆಂಗಳೂರು
2013

23. ಯಮನೂರೇಶ ಬಿರಾದಾರ – ಮಡಿವಾಳ ಮಾಚಿದೇವರ ಜೀವನ ಚರಿತ್ರೆ
ವಿಶ್ವ ಬಂಧು ಪ್ರಕಾಶನ
ಯಾದಗಿರಿ

24. ಡಾ. ವರದಾ ಶ್ರೀನಿವಾಸ (ಸಂ) – ಸುವರ್ಣ ಸಿರಿ
ಮಡಿವಾಳ ಮಾಚಿದೇವ ಧಾರ್ಮಿಕ ಟ್ರಸ್ಟ್
ಬೆಂಗಳೂರು
2010

25. ಎಂ. ಎಸ್. ಬಸವರಾಜಯ್ಯ(ಸಂ) – ಮೂರು ತಾರಾವಳಿಗಳು
ಶಿವಧರ್ಮ ಗ್ರಂಥಮಾಲಾ
ಮೈಸೂರು
1979

26. ವಿವಿಧ ಲೇಖಕರು – ಬಸವೇಶ್ವರರ ಸಮಕಾಲೀನರು
ಬಸವ ಸಮಿತಿ
ಬೆಂಗಳೂರು
2007


ಮಡಿವಾಳ ಮಾಚಿದೇವರ ನೇತೃತ್ವದಲ್ಲಿ
ವಚನ ಸಾಹಿತ್ಯದ ಕಟ್ಟುಗಳನ್ನು ಸುರಕ್ಷಿತ
ತಾಣಕ್ಕೆ ಒಯ್ಯುತ್ತಿರುವ ಶರಣ - ಶರಣೆಯರು.